ರಡನೆ ಮುತ್ತು

# ಹುಚ್ಚು-ಹುರುಳು



ಬೀಚಿ

ಮಾರ್ಚಿ ೧೯೫೧.

# ಸಂಪಾದಕರ ಮಾಮೂಲು ಮಾತು?



ಇದು ಒಂದು ಶ್ರಾದ್ಧ ನಿಯಮ? ಕಾಗದದ ಅಡಚಣೆಯಲ್ಲಿ, ಮಾತೆ ಕೃತಿಯೆಂದು ತಿಳಿದಿರುವ ಮಾತಿನಮಲ್ಲರ ಯುಗ ಗಾಳಿಯಲ್ಲೆಲ್ಲ ಮಾತಿನ ತಿಪ್ಪೆಗಳು ತೇಲುತ್ತಿರುವ ಈ ಮಹಾ ಪರ್ವಕಾಲದಲ್ಲಿ ನಮ್ಮ ಮಾಮೂಲು ಮಾತೂ ಏಕೆ? ಅವಶ್ಯವಾಗಿ ಹೇಳಲೇಬೇಕಾದ ಈ ಎರಡೇ ಮಾತನ್ನು ಹೇಳದಿದ್ದರೆ ತಪ್ಪಾದೀತು.

ಕನ್ನಡಿಗರಲ್ಲಿ ಕೊಂಡು ಓದುವವರು ಕಡಿಮೆ ಎಂಬ ಅಪವಾದವು ದೂರವಾಯಿತು 'ತಿಂಮನ ತಲೆ' ಯಿಂದ. ನಮ್ಮ ಮಾಲೆಯ ಮೊದಲ ಮುತ್ತಾದ 'ತಿಂಮನ ತಲೆ' ಮೂರೇ ತಿಂಗಳಲ್ಲಿ ಮುಗಿಯಿತು, ಕೊಂಡು ಓದುವ ಕನ್ನಡಿಗರ ಕೃಪೆಯಿಂದ. ಅಂತೆಯೆ ಎರಡನೆ ಮುದ್ರಣಕ್ಕೆ ಅನುವಾಗಿದೆ ಆದಷ್ಟು ಕಡಿಮೆ ಬೆಲೆಗೆ— ಒಂದೇ ಒಂದು ರೂಪಾಯಿ. ನಮ್ಮ ಮಾಲೆಯ ಮೊದಲ ಬಿಡಿಮುತ್ತಾದ 'ಬಡವರಿಗಾಗಿ ತಿಂಮನ ತಲೆ' ಯನ್ನು ರಸಿಕ ಕನ್ನಡಿಗರಿಗೆ ಒದಗಿಸಿಕೊಟ್ಟು, ತಿಂಮನಿಂದ ಶಬಾಸ್ ಪಡೆದ್ದಿದೇವೆ; ಇದೇ ನಿಮ್ಮ ಹೆಮ್ಮೆ! ಶೀಘ್ರದಲ್ಲಿಯೆ ಶೀಮೋಲ್ಲಂಘನ ಮಾಡಲಿದ್ದಾನೆ ತಿಂಮ; ಗುಜರಾಥಿ ಮಹಾರಾಷ್ಟ್ರಗಳಲ್ಲಿಯೂ 'ತಿಂಮನ ತಲೆ'ಯ ಅನುವಾದವಾಗಲಿದೆಯಂತೆ. ಬಂದಷ್ಟೆಲ್ಲ ಬರಲಿ, 'ತಿಂಮನ ತಲೆ' ಯೊಂದು ತಿರುಗದಿರಲಿ.

ಬೀಚಿಯವರ ಈ 'ಹುಚ್ಚು-ಹುರುಳ'ನ್ನು ನಮ್ಮ ಮಾಲೆಯ ಎರಡನೆ ಮುತ್ತಾಗಿ ಕನ್ನಡ ರಸಿಕವೃಂದದ ಮುಂದೆ ಇಡುತ್ತಲಿದ್ದೇವೆ. ಈ ಹುಚ್ಚಿನ ಬಗ್ಗೆ ಹೆಚ್ಚು ಹೇಳುವ ಇಚ್ಛೆ ನನಗೇನೂ ಇಲ್ಲ. ಹುಚ್ಚಿನೊಟ್ಟಿಗೆ (ಭೂಲ್-ಚೂಕಿನಿಂದ?) ಬಂದಿದ್ದರೂ ಬಂದಿರಬಹುದಾದ ಹುರುಳಿಗೂ ತಿಂಮಪ್ರೇಮಿಗಳು ಎಡೆಗೊಡುವರೆಂದು ನಮ್ಮ ಆಶೆ.

ಇನ್ನೊಂದು ಮಾತು. 'ದಾನಕೊಡುವದು ಬೇಡ, ದುಡಿಸಿಕೊಡದಿರಬೇಡ' ಎಂಬುದನ್ನು ಧೃಢವಾಗಿ ನಂಬಿ, ಮಾತು ಅವರಿಗೆ ಕೆಲಸ ನನ್ನಗೆ ಎಂದು ದುಡಿಯುತ್ತಿರುವ ಡಾ. ಎಂ. ಸಿ. ತುಮ್ಮಿನಕಟ್ಟಿ, ಎಂ. ಎಸ್. ಸಿ., ಪಿ. ಎಚ್. ಡಿ. ಇವರಿಗೆ ತಿಂಮನ ಪರವಾಗಿ ನಾವು ಕೃತಜ್ಞತೆಯನ್ನು ಅರ್ಪಿಸುತ್ತೇನೆ. ತಮ್ಮ ಮುದ್ರಣ ಶಾಲೆಯಲ್ಲಿ ಈ 'ಹುಚ್ಚು-ಹುರುಳ'ನ್ನು ಇಷ್ಟು ಅಂದವಾಗಿ ಉಚಿತವಾಗಿ ಮುದ್ರಿಸಿ ತಯಾರಿಸಿಕೊಟ್ಟು ತಿಂಮ ಸಾಹಿತ್ಯ ಮಾಲೆಯ ಪೋಷಕರಾಗಿದ್ದಾರೆ; ಉಳಿದ ಉದಾರಿಗಳಿಗೆ ಹಾದಿ ಹಾಕಿ ಕೊಟ್ಟಿದ್ದಾರೆ. ನೋಡಬೇಕು, ತಿಂಮನ ಪ್ರೇರಣೆ ಯಾರಾರಿಗಾಗುತ್ತದೆಯೋ, ಯಾರು ಬಲ್ಲರು.



# ಹುಚ್ಚಿಗೊಂದು ತಾಳಿಬೊಟ್ಟು

'ಗಂಜಿ ಕುಡಿಯುವವನಿಗೆ ಗಡ್ಡ ಹಿಡಿಯುವವನೊಬ್ಬ' ಎಂದಂತೆ 'ಭಾಷಣ ಮಾಡುವ ಭೂಪನಿಗೆ ನೀರು ಕುಡಿಸುವವನೊಬ್ಬ!' 'ಹುಚ್ಚು-ಹುರುಳು' ವಿಗೆ ಮುನ್ನುಡಿಯ ಮರ್ಯಾದೆ ಬೇರೆ ಬೇಕೆ? ಹುಚ್ಚಿನ ಹುರುಳನ್ನು ಕೊಂಚದರಲ್ಲಿಯೇ ಬಿಚ್ಚಬೇಕೆಂದರೆ ಹುರುಳಿಲ್ಲದ ಹುಶಾರಿಗಳಿಕಿಂತಲೂ ಹುರುಳಿನ ಹುಚ್ಚು ತಿಂಮನೇ ಮೇಲು. ಹುಚ್ಚು ತಿಂಮ ಕಚ್ಚುತ್ತಾನೆ; ಅಹುದು, ಆದರೆ ಕಂಡಕಂಡ ಕಳ್ಳರನ್ನಲ್ಲ—ಕಂಣಿಗೆ ಕಾಣದ ಕಳ್ಳತನವನ್ನು. ಅಂದಮಾತ್ರಕ್ಕೆ ಕಚ್ಚುವದೊಂದೇ ಅವನ ಕಸುಬೆಂದೂ ಅಲ್ಲ. ಚಿನ್ನಾಟವಾಡುತ್ತ ಒಡೆಯನ ಕೈ ಮೈ ನೆಕ್ಕುತ್ತ ಮಮತೆಯ ನಾಯಿಯಂತೆ ಸಮಾಜದ ನಾಯಿಯಾದ ತಿಂಮ ಇಡೀ ಸಮಾಜವನ್ನೇ ನೆಕ್ಕುತ್ತಾನೆ, ತನ್ನ ಉರುಟಾದ ನಾಲಿಗೆಯಿಂದ. ಗಾಯವಿದ್ದವರಿಗೆ ನೋವಾಗಬಹುದು, ನಂಜು ಆಗಬಹುದು ಗುಣವೂ ಆಗಬಹುದು—ಮನಸ್ಸಿನಂತೆ ಮಹದೇವ! ನೆಕ್ಕುವ ಭರಾಟೆಯಲ್ಲಿ ಅಲ್ಲಿ ಇಲ್ಲಿ ಹಲ್ಲು ತಾಗಿದರೆ 'ಕೆಟ್ಟ ನಾಯಿ ಕಚ್ಚಿತು' ಎಂದು ಹೊಡೆಯುವ ಅರಸಿಕತೆ ಮಾತ್ರ ಇರದಿದ್ದರೆ ಸಾಕು. ಸಾಕಿದ ನಾಯಿಯಾದ ಮಾತ್ರಕ್ಕೆ ಎಲ್ಲದಕ್ಕೂ

ಬಾಲವಾಡಿಸುತ್ತಿದ್ದರೆ ಬಾಲದ ಬೆಲೆಯೇ ಹೋದೀತು ಆಮೇಲೆ. ಸುಳ್ಳುತನವನ್ನು ಕಂಡು ಬೊಗಳಲುಬೇಕು, ಕಳ್ಳತನವನ್ನು ಹಿಡಿದು ಕಚ್ಚಲುಬೇಕು. ಇಷ್ಟೇ, ಈ ಹುಚ್ಚು–ಹುರುಳು!

ಈ 'ಹುಚ್ಚುಗಳು' ಎಲ್ಲವೂ ಅತ್ತ ವೇದ ಪುರಾಣಗಳಷ್ಟು ಹಳೆಯವೂ ಅಲ್ಲ, ಇತ್ತ ಕ್ಲೋರೋ ಮೈಸಿಟಿನ್‌ನಷ್ಟು ಹೊಸವೂ ಅಲ್ಲ. ಹಳೆತು ಹೊಸತು ಎಂಬುದರಲ್ಲಾದರೂ ಅದಾವ ಮಹತ್ವವಿದೆ? ತಾಯಿ ಹಳೆತು, ತಂಗಿ ಹೊಸತು, ಹೆಂಡತಿಯಂತೂ ಹೊಚ್ಚ ಹೊಸತು. ಇವರಲ್ಲಿ ಯಾರು ಬೇಕು, ಯಾರು ಬೇಡ ತಿಂಮನಿಗೆ! ಅಂತೆಯೇ ಈ ಹುಚ್ಚು–ಹುರುಳು ಒಂದು ಅವಿಭಕ್ತ ಕುಟುಂಬ. ಇವುಗಳಲ್ಲಿ ಹಲವು ಈಗಾಗಲೆ ಕೆಲವು ಪತ್ರಿಕೆಗಳಲ್ಲಿ ಪ್ರಕಟವಾಗಿವೆ; ಆಯಾ ಸಂಪಾದಕರಿಗೆ ನಾನು ಋಣಿ.

ನಿತ್ಯ ಜೀವನದಲ್ಲಿ ಕಂಡವೆಲ್ಲವನ್ನೂ ಹೇಳುವದೆಷ್ಟು ಕಷ್ಟವೋ ಕಂಡ ಹಲವನ್ನು ಬಿಡುವದೂ ಅಷ್ಟೇ ಕಷ್ಟ. ಕಷ್ಟ ಸುಖಗಳು ತಾಗುವದು ಕರ್ತವ್ಯದ ಕವಚವಿಲ್ಲದ ಕೋತಿಗಳಿಗೆ ಮಾತ್ರ; ಹೊಸೆಯು ಹೊರೆ ಹೊತ್ತ ಕತ್ತೆಗೆ ಮತ್ತಾರ ಭಯ? ತಾನು ಕಂಡುದನ್ನು ಯಾರೂ ಕಂಡಿಲ್ಲವೆಂದು ತಿಂಮನ ಜಂಬವಲ್ಲ, ಆದರೆ ತನ್ನ ಕನ್ನಡಕದಿಂದ ಇನ್ನೂ ಹಲವರು ನೋಡಲಿ ಎಂಬುದೇ ಅವನ ಹಿರಿಯಾಸೆ. ಜಗತ್ತಿನ ಉದ್ಧಾರ ಮಾಡಲು ತಿಂಮನ ಜನನವಾಗಿಲ್ಲ; ತಿಂಮನಕಿಂತಲೂ ಕಿರಿಯರಿಲ್ಲ. ಕತ್ತೆ ನಾಯಿಗಳಿಂದ ಮಾನವತ್ವದ ಪಾಠ ಕಲಿಯುತ್ತಿದ್ದಾನೆ ತಿಂಮ.

ಈ ಹುಚ್ಚನ್ನು ತಮ್ಮ ಮಾಲೆಗೆ ಹಚ್ಚಿಗೊಳ್ಳುವ ಹುಚ್ಚು 'ತಿಂಮ ಸಾಹಿತ್ಯಮಾಲೆ'ಯವರಿಗೆ ಏಕೆ ಹಿಡಿಯಿತೋ? ಅಂತೂ ಇವರ ಹುಚ್ಚಿಗೆ ನಾನು ಋಣಿ ಅಲ್ಲದೆ ಮತ್ತಾರು ಆದಾರು?

**ಬಳ್ಳಾರಿ**
ಮಾರ್ಚ್ ಮೊದಲದಿನ
೧೯೫೧.

ಕೊಂಡು
ಓದುವವರಿಗಾಗಿ
**ಬೀಚಿ**

# ಅರ್ಪಣ

ನನ್ನವಳು ನನ್ನವಳಾಗುವ ಮುನ್ನೆಯೇ ಮಡಿದು ನನ್ನ ಮಡದಿಗೆ
'ಒಳ್ಳೆ' ಸೊಸೆಯೆಂಬ ಧವಳ ಕೀರ್ತಿಯನು ತಂದ
ಹೆಂಡತಿಯ ಅತ್ತೆಗೆ

* * *

ತಾನು ಕಾಲಿಟ್ಟಮೇಲೆ ಇಷ್ಟು ಅಗಲದೆ, ಕಾಲಿಡುವ ಮುನ್ನೆಯೇ
ಸತ್ತು ಅಗಲಿದ ತನ್ನ ಸಾಧು ಅತ್ತೆಯ ಭಾವಚಿತ್ರವನ್ನು
ನೋಡಿ ಬಿಕ್ಕಿಬಿಕ್ಕಿ ಅಳುವ ನನ್ನ
ಹೆತ್ತವಳ ಸೊಸೆಗೆ

* * *

ಸಾಯದಿರು ತಂದೆ, ನಿನ್ನ ಪಿಂಚಿನಿಯು ಬರುತಿರಲು ಎಂದು
ನಾವೆಲ್ಲರೂ ಆದರದಿ ಕೂಗಲು ಗೂರುತ್ತ ಓಕೊಟ್ಟು
ನಮಗಾಗಿ ಅವಕಾಗಿ ಬದುಕಿರುವ ನನ್ನ
ಮಡದಿಯ ಮಾವಂಗೆ

* * *

ಭಾಷಣವೆಂಬ ಅಂಟುರೋಗಕೆ ಓಡುತಲೆ ಬಲಿಯಾಗಿ ಶಾಲೆಗೆ
ಶರಣೆಂದು ರಾಜಕಾರಣದ ತಿಪ್ಪೆಯ ಗದ್ದುಗೆಯನೇರಿ
ರಾರಾಜಿಸುತ್ತಿರುವ ಶಾಲೆಯ ಕಳ್ಳ ಕಡುಗಲಿ
ನನ್ನ ತಮ್ಮಂಗೆ

* * *

ಇದನೆಲ್ಲ ತೋರಿದ
ತಿಂಮಂಗೆ

* * *

# ಹುಟ್ಟು ಪಟ್ಟಿ





# ಜೋಕೆ!

ಇದರಲ್ಲಿ ಬರುವ ಸನ್ನಿವೇಶಗಳೂ ಮತ್ತು ಪಾತ್ರಗಳೂ
ಕೇವಲ ಕಾಲ್ಪನಿಕವೆಂದೂ ಯಾರನ್ನೂ ಉದ್ದೇಶಿಸಿ
ಬರೆದುವಲ್ಲವೆಂದೂ ನಿಮ್ಮ ಎದೆತಟ್ಟಿ ಹೇಳಲು
ತಿಂಮನು ಸಿದ್ಧನಿಲ್ಲ!

ತಿಂಮನ

# ತ್ರಿಮೂರ್ತಿಗಳು!

ಮಾಡದಲೆ ಆಡಿ ದುಡಿಯದಲೆ ಮುಂದಾಗುವ
ಮಾನವನು ನೀನಲ್ಲ — ಹೇ **ಕತ್ತೆ**ಗುರುವೇ!

ಮತಪಿತೃ ಪಾಲಕನ ಮನೆಕಾಯದಲೆ ಮತವಿಕ್ಕಿದಾ ಕೈ ಕಚ್ಚುವ
ಮಾನವನು ನೀನಲ್ಲ— ಹೇ **ನಾಯಿ**ಗುರುವೇ!

ಹಸಿವು ಹದಿಬಡಿಯುವರ ಸುಡುತಿರಲು ಕವಸಿಕ್ಕಿ ಉಂಡುಹೋಗುವಾ
ಕಡುಕೀಳು ಮಾನವನು ನೀನಲ್ಲ-- - ಹೇ **ಕಾಗೆ** ಗುರುವೇ!

ಮಾನವ್ಯತೆಯ ಬಿಟ್ಟ ಮಾನವಗೆ
ಕತ್ತೆತನ-ನಾಯಮನ-ಕಾಗೆ ಸ್ನಾನ
ಕೊಟ್ಟು ಕರುಣಿಸೈ ದೇವಾ!

# ಹೆಂಡತಿಯನ್ನು ಯಾವಾಗ ಹೊಡೆಯಬೇಕು?

"ಛೀ! ಅವನೇನು ಗಂಡಸು, ಮಾಡಿಕೊಂಡ ಹೆಂಡತಿಯನ್ನು ಹೊಡೆಯಲಾರ" ಎಂದು 'ಕೈಲಾಗದ' ಗಂಡನನ್ನು ಹೇಡಿಯೆಂದು ಹೀಯಾಳಿಸುವವರೂ ಇದ್ದಾರೆ ಹಲವರು. ಇನ್ನೂ ಕೆಲವರು "ಅವನು ಮನುಷ್ಯನೇನು? ಹೆಂಡತಿಯನ್ನು ಹೊಡೆಯುತ್ತಾನೆ" ಎಂದು 'ಗಂಡು' ಗಂಡನನ್ನು ತೆಗಳುತ್ತಾರೆ. ಹೆಂಡತಿಯನ್ನು ಯಾವಾಗ ಹೊಡೆಯಬೇಕು ಎಂಬ ನಮ್ಮ ಪ್ರಶ್ನೆಯಲ್ಲಿ ಹೊಡೆಯಬೇಕೋ ಬೇಡವೊ? ಎಂಬ ಮೂಲ ಪ್ರಶ್ನೆಗಂತೂ ಸ್ಪಷ್ಟ ಉತ್ತರವಿದೆ ಅಲ್ಲವೆ? ಯಾವಾಗ ಎಂಬುದಷ್ಟೆ ಪ್ರಸ್ತುತ ವಿಷಯ. ಈಗ ನಾವು (ನನ್ನನ್ನು ಮತ್ತು ನನ್ನಂತಹ 'ಕೈಲಾಗದವ'ರನ್ನು ಬಿಟ್ಟು) ಯಾವಾಗ ಹೆಂಡಂದಿರನ್ನು ಹೊಡೆಯುತ್ತಿದ್ದೇವೆ ಎಂಬುದನ್ನಿಷ್ಟು ವಿಚಾರಿಸಿ ನೋಡುವಾ. ಅಲ್ಲದೆ ಹೇಗೆ ಹೊಡೆಯುತ್ತಿದ್ದೇವೆ ಎಂಬುದನ್ನು ಮೊದಲು ನೋಡೋಣ. ಕೆನ್ನೆಗೆ ಒಂದೇ ಏಟು ಕೊಟ್ಟು ಸಿಟ್ಟು ಕಳೆದುಕೊಳ್ಳುವ ಅತಿ ಅಲ್ಪ ತೃಪ್ತಿಗಳು ಕೆಲವರು. ಧಂ ಧಂ ಎಂದು ನಗಾರಿ ಬಾರಿಸಿದಂತೆ ಬೆನ್ನಿಗೆ ಮೇಲಿಂದಮೇಲೆ ಗುದ್ದಿ ಗುದ್ದಿ ವೃಥಾ ಕೈ ನೋವು ಮಾಡಿಕೊಳ್ಳುವವರು ಹಲವರು. ಮುಷ್ಟಿ ಮಾಡಿ 'ಬಾಕ್ಸಿಂಗ' ಆಡುವವರಂತೆ ಮುಖಕ್ಕೆ ಹೊಡೆದು ಮೂಗಿನಿಂದ

ವಳದಳ ರಕ್ತ ಇಳಿಸುವವರೂ ಇದ್ದಾರೆ. ಬಂದ ಪಾಪವು ಅದಕ್ಕೇ ಬರಲಿ ಎಂದು ಕಟ್ಟಿಗೆಯಿಂದ ಹೊಡೆಯುವ ಕಲಾವಂತರಿಗೂ ಕಡಿಮೆ ಇಲ್ಲ. ಕೈಲಿದ್ದ ಸಾಮಾನುಗಳನ್ನು—ಕಂಚಿನ ತಂಬಿಗೆ, ಮಸಿಬುಡ್ಡಿ, ಥರ್ಮೋ ಫ್ಲಾಸ್ಕು, ಖೋಟಾ ರೂಪಾಯಿ, ಇತರರ ಪುಸ್ತಕ ಇತ್ಯಾದಿ ಇತ್ಯಾದಿ—ಹೆಂಡತಿಯ ಮೈ ಮುಖಕ್ಕೆ ಗುರಿಯಿಟ್ಟು ಬೀಸಿ ಎಸೆಯುವ ಬಹಸ್ಟೂರರೂ ಇದ್ದಾರೆ. ನನ್ನ ಪರಿಚಯದ ಪುಟ್ಟಾಚಾರಿ ಒಬ್ಬರಿದ್ದಾರೆ. ಅವರಿಗೆ ಬಟ್ಟೆ ಒಣಹಾಕುವ ಕೋಲಿನಿಂದ ಮಾತ್ರ ಹೆಂಡತಿಯನ್ನು ಹೊಡೆಯುವ ಮಡಿವಂತಿಕೆ ಒಗ್ಗಿದೆ. ಅವರು ಎರಡಡಿ ಎತ್ತರದ ಕಟ್ಟೆಯಮೇಲೆ ನಿಂತಾಗ ಐದು ಅಡಿ ಆದರೆ ಅವರ ಹೆಂಡತಿ ಅಡಿಗೆಯ ತಗ್ಗಿನಲ್ಲಿ ನಿಂತರೂ ಆರೇ ಅಡಿ ಇರುತ್ತಾರೆ. ಪುಟ್ಟಾಚಾರಿಗೆ ಸಿಟ್ಟಿನರೋಗ ಬರುವ ಸೂಚನೆ ಕಂಡಕೂಡಲೆ ಅವರ ಗೃಹಪತ್ನಿ ಹುಷಾರಾಗುತ್ತಾರೆ. ಬಟ್ಟೆ ಒಣಹಾಕುವ ಕೋಲು ಮೆಲ್ಲಗೆ ಮಾಳಿಗೆ ಎತ್ತರದ ಅಡ್ಡಪಟ್ಟಿಗೆ ಸೇರುತ್ತದೆ. ಆಗ ನೋಡಬೇಕು ಆಚಾರ್ಯರ ನೆಗೆತ!

ಇದುವರೆಗೂ ಹೊಡೆಯುವ ಆಯುಧ ರೀತಿಗಳನ್ನು ಹೇಳಿದ್ದಾಯಿತು. ಎಲ್ಲೆಲ್ಲಿ ಹೊಡಿಯಬೇಕು ಎಂಬ ಸ್ಥಳದ ನಿಯಮವೇನಾದರೂ ಇದೆಯೇ ಅವರ ಪೀನಲ್‌ಕೋಡಿನಲ್ಲಿ? ನಡುರಸ್ತೆಯಲ್ಲಿಯೇ ಹಲವರು ಹೊಡೆದರೆ ಮನೆಗೆ ಕರೆದುಕೊಂಡುಬಂದು ಮರ್ಯಾದೆಯಿಂದ ಹೊಡೆಯುವವರು ಕೆಲವರು—ಇದಕ್ಕೆ ಕಾರಣ ಅವರಿವರು ಬಂದು ಬಿಡಿಸುವ ಅಪಾಯವಿರಬಾರದೆಂದು! ಹೆಂಡತಿಯು ತವರ ಮನೆಯಲ್ಲಿದ್ದಾಗ ಹೊಡೆಯಲು ಕೆಲ ಗಂಡಂದಿರು ಅಂಜುತ್ತಾರೆ; ದಷ್ಟಪುಷ್ಟ ಬಾವ ಮೈದುನಂದರಿದ್ದರೆ ಇದು ಕಷ್ಟದ ಕೆಲಸ; "ಸಿವಿಲ್‌ವಾರ್" ಆಗುವ ಸಂಭವವೂ ಇರುತ್ತದೆ. ಸಂಪೂರ್ಣ ಗಂಡಂದಿರಿಗೆ ಯಾರ ಭಯವೂ ಇಲ್ಲ; ಮಕ್ಕಳೆದುರಿಗೂ ಹೊಡೆಯುತ್ತಾರೆ ಮಾವನೆದುರಿಗೂ ಹೊಡೆಯುತ್ತಾರೆ. ಅತ್ತೆಯನ್ನು ಈಗಲೂ ಹೊಡೆಯುತ್ತಿರುವ ಮಾವನಾದರೆ, ಅಳಿಯನ 'ವೀರತನ'ಕ್ಕೆ ಸೈಯೆಂದು ಶಬಾಸ್ ಸಹ ಕೊಡುತ್ತಾನೆ. ಕೆಲ ಗಂಡಂದಿ

ರಿಗೆ ಕೆಲ ನಿಯಮಗಳಾದರೂ ಇರುತ್ತವೆ. ಹೋದಲ್ಲಿ ಬಂದಲ್ಲಿ ಮಾತ್ರ ಹೆಂಡತಿಯನ್ನು ಹೊಡೆದು ಕೊಲ್ಲುವದಿಲ್ಲ. ಊರಿಗೆ ಮರಳಿ ಬರುವ ವರೆಗೂ ಹಾಗೂ ಹೀಗೂ ಜೀವವನ್ನು ಬಿಗಿ ಹಿಡಿಯುವ ತಪೋಬಲವಿದೆ ಇವರಿಗೆ. ಇದು ಹೇಡಿತನದ ಲಕ್ಷಣವೆಂದು ಹಲವು ಗುಂಡಾ ಗಂಡಗಳ ಅಭಿಪ್ರಾಯ. ಮನೆಯಲ್ಲಿ ಗಂಡನಾದವನು ಹೊರಗೆ ಗಂಡನಲ್ಲವೇ? ತನ್ನೂರಲ್ಲಿ ಮಾತ್ರ ಗಂಡ, ಪರಊರಲ್ಲಿ ಅಲ್ಲವೇ? ಎಂಬುದು ಇವರ ನ್ಯಾಯವಾದ ವಾದ. ಇವರಿಗೆ ಹೊಡೆಯುವ ಅಧಿಕಾರವು ಅನುಗಾಲವೂ ಇದೆ, ಎಲ್ಲೆಲ್ಲಿಯೂ ಇದೆ—ಹಗಲು, ರಾತ್ರಿ, ಸೂರ್ಯೋದಯವಾಗುವಾಗ ಸೂರ್ಯಾಸ್ತಮವಾಗುತ್ತಿರುವಾಗ, ಹೊಸ್ತಿಲ ಆಬದಿ, ಈಬದಿ, ಮೇಲೆ, ಕೈ ಕಲ್ಲು ಕಟ್ಟಿಗೆ (ಬೀವಿನ ಕಟ್ಟಿಗೆಯಿಂದ ಹಿಡಿದು ಗಂಧದ ಕಟ್ಟಿಗೆವರಿಗೂ) ಬಿದಿರು ಬೀಸಣಿಕೆ ಮುಂತಾದವುಗಳಿಂದ ಹೊಡೆಯುವ ಅಧಿಕಾರವನ್ನು "ಅನಾನಸೀಯ ಮೂಲಭೂತ ಹಕ್ಕು" ಗಳಿಂದ ಪಡೆದುಕೊಂಡಿದ್ದಾರೆ. ತಾಳಿಕಟ್ಟಲುಮಾತ್ರ ಬೇಕು, ಹೊಡೆಯಲು ಬೇಡವೇ?

ಹೆಂಡಂದಿರನ್ನು ಹೊಡೆಯುವ ಆಯುಧ, ರೀತಿ, ಸ್ಥಳಗಳನ್ನು ಕುರಿತು ಇದುವರೆವಿಗೂ ಚಿಂತನೆಮಾಡಿದ್ದಾಯಿತು. ಇನ್ನು ಏಕೆ ಹೊಡೆಯುತ್ತೇವೆ ಎಂಬ ಅಧ್ಯಾಯಕ್ಕೆ ಬರಬಹುದಷ್ಟೇ? ಯಾರಾದರೂ ತಪ್ಪು ಮಾಡಿದರೇ ಹೊಡೆಯುತ್ತಾರೆ, ನಿಷ್ಕಾರಣವಾಗಿ ಕೈ ಹಿಡಿದವಳ ಮೇಲೆ ಯಾರೂ ಕೈ ಮಾಡುವದಿಲ್ಲ. ಅಹುದು, ಎಲ್ಲರೂ ಸಕಾರಣವಾಗಿಯೇ ಹೊಡೆಯುವದು. ಎಲೆಯಲ್ಲಿ ಎಡಗಡೆ ಹಾಕಬೇಕಿದ್ದ ಉಪ್ಪನ್ನು ಬಲಗಡೆ ಹಾಕುವದು ಏನು ಸಾಮಾನ್ಯ ಅಪರಾಧವೇ? ಸಾರನ್ನು ಬಡಿಸುವಾಗ ಅದು ಹರಿದು ಪಲ್ಲೆಯಲ್ಲಿ ಸೇರಿದರೆ ಕ್ಷಮಿಸಲು ಸಾಧ್ಯವೇ? ಕಾಫಿ ತಡವಾದಾಗ ಹೊಡೆಯದೆ ಇರಲು ಬರುತ್ತೆಯೇ? ಮೊದಲು ಮೊಸರು ನೀಡಿ ಆ ಮೇಲೆ ಹಾಲು ನೀಡುವಬದಲು ಮೊದಲೇ ಹಾಲು ನೀಡಿಬಿಟ್ಟರೆ ಕೆನ್ನೆಗೆ ತೀಡಿ ಕೊಡದಿದ್ದರೆ ಹೇಗೆ? ಅಜಾಗರೂಕತೆಯಿಂದ ದೀಪದ ಗ್ಲಾಸನ್ನಾಗಲಿ, ತೊಳೆಯುವಾಗ ಗಾಜಿನ ಸಾಮಾನುಗಳನಾ

ಗಲಿ ಒಡೆದಾಗಲೂ ಅವರಿಗೆ ಏಟುಗಳು ಬೀಳಬೇಡವೇ ? ಪತಿದೇವನು ಹೊಡೆದದ್ದನ್ನು ಅವರಿವರಮುಂದೆ-ತಾಯಿ, ಅಕ್ಕ-ತಂಗಿಯರ ಮುಂದೆಯೇ ಆಗಲಿ ಹೇಳಿಕೊಂಡರೆ ಪುನಃ ಹೊಡೆಯಬೇಕೋ ಬೇಡವೊ ? ಹೊಡೆಯುವಾಗ ಕೂಗಿ ಚೀರಿ ಅತ್ತು ಗಲಾಟೆ ಮಾಡಿದರೆ ಏಕೆ ಹೆಚ್ಚು ಹೊಡೆಯಬಾರದು ? ಹೊಡೆದಾಗಲೂ ಅಳದೆ ಸುಮ್ಮನಿದ್ದರೆ ಕೊನೆಗೆ ಅಳುವವರೆಗಾದರೂ ಹೊಡೆಯದಿದ್ದರೆ ಹೇಗೆ ? ಹೇಳಲು ಬಾರದೆ ಹೊಟ್ಟೆನೋವಿನಿಂದಲೋ ಕಿವಿಶೂಲೆಯಿಂದಲೋ ಕಿರಿಚಿಕೊಳ್ಳುವ ಮೂರು ತಿಂಗಳ ಮಗುವನ್ನು ಸಮಾಧಾನಮಾಡಲು ಬಾರದ ಹೆಂಡತಿಯನ್ನು ಎಷ್ಟು ಬಾರಿ ಹೊಡೆದರೂ ಕಡಿಮೆಯೇ. ಕೈಯಲ್ಲಿ ಕಾಸು ಇಲ್ಲದಾಗ ಮನೆಯಲ್ಲಿ ಅಕ್ಕಿ ಇಲ್ಲ ಎಂಬ ಹೆಂಡತಿಯನ್ನು ಹೊಡೆಯದೆ ಗತ್ಯಂತರವಿದೆಯೇ ? ಬಜಾರದಲ್ಲಿ ಬೆಲ್ಲ ದೊರೆಯದಿದ್ದರೆ, ಆಫೀಸಿನಲ್ಲಿ ಆಟ ಸಾಗದಿದ್ದರೆ, ಮಲಗಿದಾಗ ತಿಗಣೆ ಕಡೆದರೆ. ಮಗನು ಶಾಲೆಯಲ್ಲಿ ನಪಾಸಾದರೆ, ಮಳೆಯಾಗಿ ರಸ್ತೆಯಲ್ಲಿ ಕೆಸರಾದರ, ಸಾಲಕೊಟ್ಟವರು ಕಾಟಕೊಟ್ಟರೆ, ತನ್ನ ಲೇಖನವನ್ನು ಸಂಪಾದಕರು ಸ್ವೀಕರಿಸಿ ಹಣ ಕಳಿಸದಿದ್ದರೆ, ಗಂಡನೆಂಬ ಸಾಧು ಪ್ರಾಣಿಯು ತನ್ನ ಹೆಂಡತಿಯನ್ನಲ್ಲದೆ ಬೇರಾರನ್ನು ಹೊಡೆಯಲು ಸಾಧ್ಯ? ಯಾರೂ ನಿಷ್ಕಾರಣವಾಗಿ ಹೊಡೆಯುವದಿಲ್ಲ. ತಾನು ಅವಳ ಗಂಡನೆಂಬುದೇ ಮೊದಲ ಕಾರಣ ! ಹೊಡೆಯುವ ಗಂಡನನ್ನು ಅನ್ಯಾಯವಾಗಿ ದೂರುವ ಹೆಂಡಂದಿರು ಒಂದುವೇಳೆ ತಾವೇ ಗಂಡಂದಿರಾಗಿದ್ದರೆ ಬಿಡುತ್ತಿದ್ದರೇ ?

ಎಲ್ಲ ಗಂಡಂದಿರು ಸ್ವಂತ ಬುದ್ಧಿಯಿಂದಲೇ ಹೊಡೆಯುವಷ್ಟು ಜಾಣರಿಲ್ಲ. ತಾಯಿಯ—ಅರ್ಥಾತ್ ಏಕಮಾತ್ರ ಹೆಂಡತಿಯ ಅತ್ತೆಯ-ಮಾತನ್ನು ಕೇಳಿ ಮಾತೃಭಕ್ತಿಯಿಂದ ಹೊಡೆಯುತ್ತಾರೆ. ಶ್ರೀರಾಮನಂತೆ ಪಿತೃವಾಕ್ಯ ಪರಿಪಾಲನೆಗಾಗಿಯೂ ಪರಿಪರಿಯಿಂದ ಹೊಡೆಯುತ್ತಾರೆ. ದ್ವಿಪತ್ನೀ ಪುರುಷನಾದರಂತೂ ಅವರಿವರ ಅವಶ್ಯಕತೆಯೇ

ಇಲ್ಲ; ಅವಳಿಂದ ಚಾಡಿ ಕೇಳಿ ಇವಳನ್ನು ಇವಳಿಂದ ಚಾಡಿ ಕೇಳಿ ಅವಳನ್ನು ನಿಷ್ಪಕ್ಷಪಾತದಿಂದ ಹೊಡೆದು ಕೆಡವಬಹುದು. ಇವರಾರೂ ಇಲ್ಲದಿದ್ದರೆ ಹೊರಬಾಗಿಲಲ್ಲಿಯೇ ಕೂಗಿ ಹೇಳುವ ಮಕ್ಕಳಾದರೂ ಇದ್ದೇ ಇರುತ್ತವೆ. ಇಲ್ಲವೆ ಸುತ್ತುಮುತ್ತಲಿನ ಮನೆಯವರಾದರೂ ಈ ಉಪಕಾರವನ್ನು ಮಾಡಬಹುದು.

ಅಥಾತೋ ಗಂಡ ಜಿಜ್ಞಾಸಃ. "ಗಂಡ"ಎಂಬ ಶಬ್ದದ ಸರಿಯಾದ ಅರ್ಥವನ್ನು ಅರಿಯದವರೇ ಹೊಡೆಯುವ ಗಂಡನನ್ನು ಹೀಯಾಳಿಸುತ್ತಾರೆ. ಗಂಡನೆಂಬುದು ಕನ್ನಡ ಶಬ್ದವೇ ಅಲ್ಲ. ಇದೊಂದು ದೇವಭಾಷೆಯಾದ ಸಂಸ್ಕೃತ ಶಬ್ದ. "ಗಂಡ" ಎಂದರೆ ವ್ರಣ, ಹುಣ್ಣು ಎಂಬುದೇ ಮೂಲದಲ್ಲಿರುವ ಅರ್ಥ. "ಗಂಡಮಾಲೆ" ಅನ್ನುವದಿಲ್ಲವೇ? "ಗಂಡಾಂತರ" ಎಂದರೇನು ?

ಹೆಂಡತಿಯನ್ನು ಯಾವಾಗ ಹೊಡೆಯಬೇಕು ಎಂಬ ಪ್ರಶ್ನೆಗೆ ಉತ್ತರವೇ ಬರಲಿಲ್ಲವೇನು ? ಅವಳು ತಿರುಗಿ ಹೊಡೆಯಲು ತಯಾರಾಗುವವರೆಗೂ ಹೊಡೆಯುತ್ತಿರುವುದೇ ಮೇಲು, ಹೆಂಡತಿಯ ಮೈಗೂ ಒಳ್ಳೆಯದು ಗಂಡನ ಕೈಗೂ ಒಳ್ಳೆಯದು.



# ತಿಂಮನ ಬಾನುಲಿ ಕಾರ್ಯಕ್ರಮ

ಹೋಗುವವರೊಡನೆಲ್ಲ ಹೋದೇನು, ಬರುವವರೊಡನೆಲ್ಲ ಬಂದೇನು ಎನ್ನುತ್ತಿದ್ದ ಹುಡುಗರಂತೆ ತಿಂಮ. ಓಡುವ ಕುದುರೆಯನ್ನು ಕಂಡಾಗ ನಾನೂ ಸವಾರಿ ಮಾಡಬೇಕು ಎಂಬ ಚಪಲ ಮನಸ್ಸಿಗೆ. ಕುಣಿಯುವವರನ್ನು ಕಣ್ಣು ಕಂಡಾಗ ಕಾಲು ಗೆಜ್ಜೆ ಬೇಡಿತು. ರೇಡಿಯೊ ಪೆಟ್ಟಿಗೆ ಹಾಡಿದ್ದನ್ನು ಕೇಳಿದ ತಿಂಮ ಒಂದು ಬಾರಿ. ಕೂಡಲೆ ನಿರ್ಧರಿಸಿದ, ಮಾನಹೋಗಲಿ ಪ್ರಾಣ ಉಳಿಯಲಿ ತಾನೂ ರೇಡಿಯೋದಲ್ಲಿ ಒಂದು ಬಾರಿ ಹಾಡಿಯೇ ಸಾಯಬೇಕೆಂದು. ಮಲಗಿದ ತಿಂಮ ಎದ್ದು ಕುಳಿತ; ಮುಂದೊಂದು ತಂಬಿಗೆಯನ್ನಿಕ್ಕಿಕೊಂಡು ಮೊದಲು ತಾಲೀಮು ನಡೆಸಿದ. ಮೂಗಿನಿಂದ ಬಾಯಲ್ಲಿ ಹಾಡಿಕೊಂಡು ಕಿವಿಗೆ ಆನಂದವನ್ನು ಸಲ್ಲಿಸಿದ. ಬಂದಿತು ಬಾನುಲಿಯಲ್ಲಿ ಹಾಡಲಿಕ್ಕೆ! ಶಬಾಸ್ ತಿಂಮಾ ಎಂದು ಬೆನ್ನು ಚಪ್ಪರಿಸಿಗೊಂಡು ಹಿರಿಹಿರಿ ಹಿಗ್ಗಿದ ಮುಗಿಲ ಆ ಬದಿವರೆಗೂ. ತಾನೊಂದು ರೇಡಿಯೋ ಸ್ಟಾರ್ ಆದ, ರೇಡಿಯೋ ಮೂನ್ ಆದ, ರೇಡಿಯೋ ಕ್ಲೌಡ್ ಆದ ಕನಸಿನಲ್ಲಿಯೇ

ಇನ್ನೇಕೆ ತಡ ಎಂದವನೇ ಪಕ್ಕೆಯ ಖೋಲಿಯಲ್ಲಿದ್ದ ವಿದ್ಯಾರ್ಥಿಗಳಿಗೆ ಗಂಟುಬಿದ್ದು ಇಂಗ್ಲೀಷಿನಲ್ಲೊಂದು ಪತ್ರವನ್ನು ಬರೆಯಿಸಿಗೊಂಡ.

ಕಾಫಿಗೆ ನಾಲ್ವಾಣೆಕೊಟ್ಟು ಈ ಕಲಾಕೃತಿಯನ್ನು ಸುಂದರವಾಗಿ ಟೈಪಿಸಿ ರಿಜಿಸ್ಟರ್ ಎಂದು ರವಾನೆ ಮಾಡಿದ ಗವಾಯಿ ತಿಂಮ. ಮೂರು ಹಗಲು ಮೂರು ರಾತ್ರಿಗಳನ್ನು ಮೂರು ಯುಗಗಳಂತೆ ಕಳೆಯಬೇಕಾಯಿತು. ಹೊಸ ಹೆಂಡತಿಯನ್ನು ಮೊದಲುಬಾರಿ ತವರಿಗೆ ಕಳುಹಿದ ಗಂಡನಂತೆ ಉಶ್ ಉಶ್ ಎಂದು ಉಸಿರು ಬಿಡುತ್ತ ಕಂಡವರಮೇಲೆ ಹರಿಹಾಯುತ್ತ ಅಂಚೆ ಜವಾನನಿಗಾಗಿ ತಪಸ್ಸು ಮಾಡಿದ. ತಿಂಮನ ತಪದ ಪ್ರಭಾವವೋ ಎನ್ನುವಂತೆ ಬಂದೇಬಿಟ್ಟಿತು ಬಾನುಲಿ ಕಚೇರಿಯ ಮಾಮೂಲ ಕಾಗದ. ಕಣ್ಣೊತ್ತಿಕೊಂಡು, ಹಣೆಗೆ ಹಚ್ಚಿಕೊಂಡು, ದೇವರ ದೀಪಕ್ಕೆ ಮುಟ್ಟಿಸಿ ಪತ್ರವನ್ನು ಒಡೆದು ನೋಡುವಾಗ ತಿಂಮನ ಎದೆ ಡಬಡಬ ಬಡಿದುಕೊಳ್ಳುತ್ತಿತ್ತು. ಲಕ್ಕೋಟೆಯನ್ನು ಹರಿದ, ಹಿಂದೆಯೇ ಮೂರ್ಛೆಹೋದ ಆನಂದೋದ್ರೇಕದಿಂದ. ಕೈ ಹಿಡಿದವಳು ತಲೆ ಹಿಡಿದಳು, ಕತ್ತು ಹಿಡಿಯುತ್ತಿದ್ದ ಮಗನು ಕಾಲು ಹಿಡಿದ. ಹೊತ್ತುತಂದು ಹಾಸಿಗೆಗೆ ಚಲ್ಲಿ ಮುಖಕ್ಕೆ ನೀರೆರಚಿದರು. ತಿಂಮನ ಮುಖ್ಯ ಪ್ರಾಣನಂತಹ ಮುಖದ ಮೇಲೆ ಪ್ರಾಣದೇವರ ಸಂಚಾರವಾಯಿತು.

"ಹೋಗಿ ಬರುತ್ತೇನೆ ಧಾರವಾಡಕ್ಕೆ, ಮೊದಲು ನೋಟಕ" ಎಂದು ಕಾಲ್ತೆಗೆದ. ಬಾನುಲಿ ಕೇಂದ್ರದ ಮಂತ್ರಿಗಳಿಂದ ಹಿಡಿದು ಸಂಗೀತಕ್ಕೆ ಸಂಬಂಧವಿಲ್ಲದ ಮಾಲಿಗಳ ಮಕ್ಕಳವರೆಗೂ ಪ್ರತಿಯೊಬ್ಬರಿಗೂ ಪತ್ರಗಳನ್ನು ತಂದ. ಅಂತೂ ಕಡೆಗೊಮ್ಮೆ ಪಾಸು ಮಾಡಿಸಿಗೊಂಡು ಮುಂದಿನ ಮುಹೂರ್ತವನ್ನು ನಿರ್ಧರಿಸಿಗೊಂಡು ಮನೆಗೆ ಹಿಂದಿರುಗಿದ.

"ನನ್ನ ಹಾಡನ್ನು ಯಾರಾರು ಕೇಳುತ್ತಾರೆ! ಬಡ ಹಳ್ಳಿಗಳು, ಗಿಡಬಳ್ಳಿಗಳು, ದೀಪದ ಕಂಬಗಳು, ರಸ್ತೆ ಚರಂಡಿಗಳು, ಎತ್ತು ಕತ್ತೆಗಳು........" ಹೀಗೆಯೇ ಓಡಿತು ತಿಂಮನ ತಲೆ. ಮುಂದೊಮ್ಮೆ ಅಡ್ಡತಿರುಗಿ ಇನ್ನೊಂದು ಹಾದಿ ಹಿಡಿಯಿತು. "ಒಂದೇಬಾರಿ ಹಾಡಿದರೇನು ಪ್ರಯೋಜನ? ಮೇಲಿಂದಮೇಲೆ ನಾನು ಬಾನುಲಿಯಲ್ಲಿ ಹಾಡಬೇಕು.

ನಾನು ಹಾಡುವಕಿಂತಲೂ ಹೆಚ್ಚುಬಾರಿ ಜನರು ಕೇಳಬೇಕು. 'ಹಾಂ' ಎಂದವನೇ ಎಷ್ಟುಕುಳಿತ. ತಲೆಯಲ್ಲೊಂದು ಮಿಂಚು ಹೊಳೆಯಿತು. 'ಅಂದು ರೇಡಿಯೊ ಕೊಡುವ ಹತ್ತುರೂಪಾಯಿಗಳು ಇಂದೇ ಹೋಗಲಿ' ಎಂದವನೇ ಎರಡುನೂರ ಹದಿಮೂರು ಅಂಚೆ ಕಾರ್ಡುಗಳನ್ನು ನಗದು ಕೊಟ್ಟು ಕೊಂಡುತಂದು ತನ್ನ ಪರಿಚಿತಾಪರಿಚಿತರಿಗೆಲ್ಲ ಪತ್ರಗಳನ್ನು ಬರೆಸಿದ. ಉಳಿದೊಂದು ಕಾಲಾಣೆಯನ್ನು ಅಂಚೆ ಡಬ್ಬಿಯಲ್ಲಿಯೇ ಲಂಚವಾಗಿ ಹಾಕಿ ಕೈಮುಗಿದು ಅರ್ಜೆಂಟಾಗಿ ಹೋಗಲಿ ಎಂದು ವಿಜ್ಞಾಪಿಸಿದ.

"ತಿಂಮನ ಸಂಗೀತಕ್ಕೆ ನಾವೆಲ್ಲರೂ ಮನಮೆಚ್ಚಿ ಮುಗ್ಧರಾಗಿ ಮೈಯೆಲ್ಲ ಕಿವಿಯಾಗಿ ಕೇಳಿ ಆನಂದಾಮೃತವನ್ನು ಸವಿದೆವು, ಇಂತಹ ತಿಂಮಗಂಧರ್ವನನ್ನು ದೊರಕಿಸಿಕೊಂಡ ಬಾನುಲಿಕೇಂದ್ರವೇ ಧನ್ಯೆಧನ್ಯೆ! ಮೇಲಿಂದಮೇಲೆ ಇದರಂತೆ ತಿಂಮನ ಕಾರ್ಯಕ್ರಮವನ್ನು ನೀವು ಏರ್ಪಡಿಸಲೇಬೇಕು. ಇಲ್ಲವಾದರೆ ನಮ್ಮ ಪಾರ್ಕಿನಲ್ಲಿಯ ಚಹದಂಗಡಿಗಳಲ್ಲಿಯ ಎಲ್ಲ ರೇಡಿಯೋ ಪೆಟ್ಟಿಗೆಗಳನ್ನು ಸಂತೆಯಲ್ಲಿಕ್ಕಿ ಮಾರಿಸಿ ಬಿಡುತ್ತೇವೆ" ಎಂದು ನೀವು ಅಂದೇ ರೇಡಿಯೋ ನಿಲ್ದಾಣಕ್ಕೆ ಒರೆಯಿರಿ ಎಂಬ ತಿಂಮನ ಕಳಕಳಿಯ ಬಿನ್ನಹವು ಮನೆಮನೆಗೂ ಬಂದಿತು. ಪತ್ರಗಳನ್ನು ಓದಿದ ಹಲವರು ತಿಂಮನಿಗಾಗಿ 'ಅಯ್ಯೋ ಪಾಪ! ನಾವೂ ಒಂದು ಪತ್ರವನ್ನು ಬರೆದರಾಯಿತು ಬಾನುಲಿ ಕಟ್ಟೆಗೆ' ಎಂದುಕೊಂಡರು. ಕೆಲವರು 'ನಮ್ಮ ಗಂಟೇನು ಹೋಯಿತು, ಬರೆದು ಬಿಸಾಡಿಬಿಡೋಣ' ಎಂದರು. 'ಛೀ! ಛೀ! ಬರೆಯಲೇಬೇಕು. ಅವನು ಹೇಗೇ ಹಾಡಲಿ ನಮ್ಮ ಜಾತಿಯವನು' ಎಂದರು ಉಳಿದ ಅಭಿಮಾನಿಗಳು.

ತಿಂಮನ ಕಾರ್ಯಕ್ರಮದ ದಿನವು ಬಂದೇಬಿಟ್ಟಿತು. ಮರುದಿನ ಮಾತ್ರ ನೋಡುವಂತಿತ್ತು ಅಂಚೆ ಜವಾನನ ಫಜೀತು. ತಿಂಮನು ಕೋರಿದಂತೆ ನೂರಾರಲ್ಲ – ಸಹಸ್ರಾರು ಪತ್ರಗಳು ಮಾಲುಗಾಡಿಗಳಲ್ಲಿ

ಬಂದಿಳಿದವು ಧಾರವಾಡದಲ್ಲಿ. ಹೊರಲಾರದೆ ಕಿರ್ ಕಿರ್ ಎಂದಿತು ಎಂಟುಚಕ್ರಗಳ ಲಾರಿಯೊಂದು. ಬಾನುಲಿ ಅಧಿಉಪಅಧಿಕಾರಿಗಳಿಗೆ ಮಾತಿಗೊಮ್ಮೆ ಕೈಮುಗಿದು ನಗಲುಸಹ ಸವುಡಿಲ್ಲದಾಯಿತು. "ಕೂಲಿ ಇಟ್ಟು ಎಲ್ಲ ಪತ್ರಗಳನ್ನು ಓದಿಸಿದರು. ಎಲ್ಲವುಗಳಲ್ಲಿಯೂ ಒಂದೇ ಮಾತು. "ನಿನ್ನೆ ರಾತ್ರಿ ತಮ್ಮ ಬಾನುಲಿಯಿಂದ ತಿಂಮನ ಗಾನವನ್ನು ಆಲಿಸಿದೆವು. ಏನು ಸ್ವರ್ಗ ಏನು ಸ್ವರ್ಗವದು! ಕನ್ನಡಿಗರಿಗೆ ಕರ್ಣಾ ವೃತವನ್ನು ಸುರಿಸಿದ ನಿಮಗೆ ಇಡೀ ನಾಡೇ ಚಿರಋಣಿ" ಎಂದು ಪತ್ರಿಕೆ ಗಳೂ ದೀರ್ಘ ಸಂಪಾದಕೀಯವನ್ನು ಒರೆದು ಹೊಟ್ಟೆಯೊಂದಿಗೆ ಸ್ಥಳ ವನ್ನೂ ತುಂಬಿಕೊಂಡವು. ಈ ಮೆಚ್ಚುಗೆಯ ಪತ್ರಗಳ ರಾಶಿಯುಮುಂದೆ ಕುಳಿತ ರೇಡಿಯೋ ಅಧಿಕಾರಿಗಳು ಏನು ಮಾಡಲು ತೋಚದೆ ಗಲ್ಲಕ್ಕೆ ಕೈಯಿಕ್ಕಿ ಕುಳಿತುಬಿಟ್ಟರು.

ಬಂದೇಬಂದಿತು ತಿಂಮನ ತಾರು. "ಹುಬ್ಬಳ್ಳಿಯ ನಿಲ್ದಾಣದಲ್ಲಿ ಪರಪಾಟು ಆಗಿ ಧಾರವಾಡದ ಗಾಡಿಯನ್ನು ಬಿಟ್ಟು ಹಾವೇರಿಯ ಗಾಡಿಯಲ್ಲಿ ಹತ್ತಿದ್ದೇನೆ. ಹೇಗಾಯಿತೋ ನನ್ನ ಕಾರ್ಯಕ್ರಮ ?"



# ಸಹಾನುಭೂತಿಯು ಸಂಪ್ರ

ಆಫೀಸಿಗೆ ರಜೆಯೆಂದರೆ ಆಕಳಿಕೆಗೆ ಔತಣ ಕೊಟ್ಟಂತೆಯೇ. ಅಭ್ಯಾಸವಿಲ್ಲದೆ ಮನೆಯಲ್ಲಿ ಕುಳಿತರೆ ಮಕ್ಕಳ ಚೀರಾಟಕ್ಕೂ ಅವುಗಳ ತಾಯಿಯ ಕೂಗಾಟಕ್ಕೂ ಆಫೀಸಿನಲ್ಲಿ ನಿತ್ಯವೂ ತಲೆಯಿಲ್ಲವೆಂದೆನಿಸಿ ಕೊಳ್ಳುವ ತಿಂಮನಿಗೂ ತಲೆನೋವು ಬರಲು ಸಾಕು- ಎಲ್ಲಿಯಾದರೂ ತಿರುಗಾಡಿ ಕೊಂಚ ಆದಿತ್ಯವಾರಿಸೋಣವೆಂದು ಇದ್ದುಬಿದ್ದ ಕಾಸನ್ನು ಕಿಸೆಗೆ ತುಂಬಿ ಮನೆಯಿಂದ ಕಾಲ್ದೆಗೆದ. ನಾಲ್ಕು ಹೆಜ್ಜೆ ನಡೆದುಬಂದು ರಸ್ತೆಯಲ್ಲಿ ನೋಡಿದರೆ ಅದೇಕೋ ಎಲ್ಲವೂ ಭಣಗುಟ್ಟಿಸುತ್ತಿತ್ತು. ಥಕ ಥಕಥಕಥಕ ಠಿಸ್ಸೆಂಬ ಟ್ರಾಮೇ ಇಲ್ಲ ಮೊದಲು. ಕರೆಂಟಿಗೂ ಆದಿತ್ಯವಾರ ವೇನೋಯೆಂದು ಯೋಚಿಸುತ್ತ ಹಾಗೆಯೇ ನಿಂತ. ಕಾಲ್ನಡಿಗೆಯಿಂದ ಹೋಗುವದಾದರೂ ಎಲ್ಲಿಗೆ? ಇಷ್ಟಕ್ಕಿದ್ದಂತೆ ಬಂದೇ ಬಂದಿತು ಕುಡು ಗೋಲು ಸುತ್ತಿಗೆ ಕೈಯಲ್ಲಿ ಹಿಡಿದು "ಜೈ" ಕಾರ ಮಾಡುತ್ತ ಮೆರ ವಣಿಗೆ ಯೆಂಬೊಂದು ಗುಂಪು. ಏನು ಗಲಾಟೆ ಎಂದು ಮೆರವಣಿಗೆಯ ಬಾಲದಲ್ಲಿದ್ದೊಬ್ಬನನ್ನು ತಿಂಮ ಕೇಳಿದ. ಗೊತ್ತಿಲ್ಲವೆಂದು ಕೈಯಿಂದಲೇ ಹೇಳಿ ಕಾಲು ತುಳಿದು ಓಡಿದ ಮಹಾರಾಯ. ಖಾಖಿ ಉಡುಪಿನ ಟ್ರಾಮ ಸಾರಥಿಯೊಬ್ಬ ನೆಲದಮೇಲೆಯೇ ನಡೆದು ಬರುತ್ತಿದ್ದ. ಮುಗಿಲಲ್ಲಿ

ಧೂಮಕೇತುವಿನ ದರ್ಶನವಾದಂತಾಯಿತು. "ಟ್ರಾಮಿಗೆ ಕರೆಂಟಿಲ್ಲವೇ?" ಎಂದು ಕೇಳಿ ಮುತ್ತಿನಂತಹ ಮಾತು ಅವನ ಬಾಯಿಂದ ಬಂದೀತೆಂದು ಅವನ ಮುಖ ನೋಡುತ್ತಿದ್ದಾಗ ಸಿಡಿಲಿನ ಸಂಪು ಎಂದು ಸುದ್ದಿ ಹೇಳಿ ಮುಂದೆ ಸಾಗಿದ. "ಸಂಪು ಏಕೆ?" ಎಂದು ಕೊಂಚ ಭಯದಿಂದಲೇ ಕೇಳಿದರೆ ಆ ಸಾರಥಿ "ಬಸ್ಸಿನವರ ಸಂಪಿದೆ, ನಮ್ಮದು ಸಹಾನುಭೂತಿಯ ಸಂಪು" ಎಂದವನೇ ಮೆರವಣಿಗೆಯಲ್ಲಿ ಮಾಯವಾದ. ಸರಿ, ಬಸ್ಸಿನ ಆಶೆಯೂ ಹೋಯಿತು ತಿಂಮನಿಗೆ.

ಬಿಸಿಲಿನಲ್ಲಿ ಅಲೆದಾಡಿ ಬಾಯಾರಿಕೆಯಾಯಿತು. ಮಹಾಪಾನಕ್ಕೆ ಮೃತ್ಯುಪ್ರಾಯವಾಗಿದ್ದ ಶೀಲವಂತ ಸರಕಾರವು ಅಲ್ಪಪಾನ ಪ್ರೇಮಿಗಳಾದ ಕಾಫಿ ಕುಡುಕರಿಗಾದರೂ ಕರುಣೆ ತೋರಿಸಿದೆ ಸಧ್ಯ ಎಂಬ ಸಂತಸದಿಂದ ಉಡುಪಿ ಯಾತ್ರೆಗೆ ಹೊರಟ ತಿಂಮ. ಜೇಬಿನಲ್ಲಿದ್ದ ಹಣವನ್ನು ಎರಡೆರಡುಬಾರಿ ಎಣಿಸಿನೋಡಿ, ಏನೇನನ್ನು, ಎಷ್ಟೆಷ್ಟು, ಎಷ್ಟೆಷ್ಟುಬಾರಿ, ಹೇಗೆ ಹೇಗೆ, ಯಾವುದಾವುದರಿಂದ, ಯಾವುದಾದಮೇಲೆ ಯಾವುದನ್ನು, ಯಾವುದರ ಮುಂಚೆ ಯಾವುದನ್ನು, ಎಷ್ಟೆಷ್ಟು ಸಮಯ ತಿನ್ನತಕ್ಕದ್ದೆಂದು ರಸ್ತೆಯಲ್ಲಿಯೇ ನಿಷ್ಕರ್ಷಿಸಿ ಹೋಟೇಲ ಬಾಗಿಲಿಗೆ ಬಂದುನಿಂತ ಮಹಾದ್ವಾರದಲ್ಲಿದ್ದ ಜಯವಿಜಯರು—ವೀರ ಪೋಲೀಸಿಗಳು-ಅಡ್ಡ ಕೈಯಿಕ್ಕಿದರು. ಕೋಪದಿಂದ ತಪ್ತನಾಗಿ ತಾನೂ ನಾರದರಂತೆ ಶಪಿಸಿದರೆ ಲಾಕಪ್ಪೇ ಗತಿ! ಅದನ್ನು ತಪ್ಪಿಸಿಕೊಳ್ಳಲು ಬೇಕಾದಷ್ಟು ತಪೋಬಲವಾದರೂ ತಿಂಮನ ಜೇಬಿನಲ್ಲಿ ಝಣಗುಡುತ್ತಿದ್ದರೆ ಆ ಮಾತೇ ಬೇರೆ ಇರುತ್ತಿತ್ತು. ತುಸು ಸಮಯದಲ್ಲಿಯೇ ಉಡುಪಿಯ ಸಾಕ್ಷಾತ್ ಒಡೆಯರು ಅವನ ಕ್ಷುದ್ಬಾಧೆಗೆ ಮೆಚ್ಚಿ ಪ್ರತ್ಯಕ್ಷವಾಗಿ ಕೇಳುವ ಮುನ್ನವೇ 'ಕೆಲಸಗಾರರ ಸಂಪು' ಎಂದು ಹೇಳಿ ಇಳಿಮುಖದಿಂದ ಒಳ ಹೋದರು. ಗದ್ದುಗೆಯಮೇಲೆ ಕುಳಿತು ನೇವ ತಗೆದುಕೊಳ್ಳುತ್ತಿದ್ದ ಒಡೆಯನು ಕಾಲು ಸುಟ್ಟ ಬೆಕ್ಕಿನಂತೆ ಓಡಾಡುವವನ್ನು ಕಂಡು 'ಅಯ್ಯೋ

ಪಾಪ' ಎನಿಸಿತು ತಿಂಮನಿಗೆ. ಆಗ ನಂಬಿಕೆಯಾಯಿತು ಉಡುಪಿಯೊಡೆಯನು ನಿಜವಾಗಿಯೂ ಭಕ್ತಪರಾಧೀನನೆಂದು. ಕರಿಗಾಲಿನವರ ಗೋಣು ಮುರಿಯಲು ಸಂಪು ಮಾತೆಯ ಮಕ್ಕಳು ಕಾಲುಹಾದಿಯ ಮೇಲೆ ಕಾದು ನಿಂತಿದ್ದರು. "ಏಕಯ್ಯಾ, ನೀವು ಸಂಪು ಹೂಡಿದ್ದೀರಿ?" ಎಂದು ಒಬ್ಬ ಸಂಪಾಗ್ರಹಿಯನ್ನೇ ಪ್ರಶ್ನಿಸಿದ. "ಟ್ರಾಮುಗಳ ಸಂಪಿದೆ ನಮ್ಮದು ಸಹಾನುಭೂತಿಯ ಸಂಪು" ಎಂದು ನುಡಿದು ದುರದುರನೆ ನೋಡಿದರು. ತಾವು ಸಂಪುಹೂಡಿದಾಗ ದುಡಿಯಲು ಬಂದ ಕರಿಗಾಲು ಇವನೆಂದು ಅವರಿಗೆ ಅನುಮಾನವಾಯಿತೇನೋ? ಜೀವದ ಭಯದಿಂದ ಜಾಗ ಬಿಟ್ಟ ತಿಂಮ

ಮನೆಬಿಟ್ಟು ಬಂದುದಕ್ಕೆ ಒಂದಾದರೂ ಆಗಲೇಬೇಕೆಂದು ತಿಂಮ ಮಹಾಲಕ್ಷ್ಮಿ ಹೇರಕಟ್ಟಿಂಗ್ ಸಲೂನಿಗೆ ಪ್ರಯಾಣ ಬೆಳೆಸಿದ. ಸಲೂನಿನ ಮುಂದೆ ಹನುಮನ ಬಾಲದಂತಹ "ಕ್ಯೂ" ನಲ್ಲಿ ತಲೆ ಇಟ್ಟು ಬಂದು ಬೆಂಚಿಯಮೇಲೆ ಕುಳಿತಾಗ ಓದಲು ಒಂದು ವೃತ್ತಪತ್ರಿಕೆಯು ಕೈಲಿರಲೆಂದು ಊರೆಲ್ಲವೂ ಅಲೆದರೂ ರಸ್ತೆತುಂಬ ಚೀರುವ ಹುಡುಗರ ಸೊಲ್ಲೇ ಇರಲಿಲ್ಲ. "ಅಚ್ಚಿನ ಮನೆಯಲ್ಲಿ ಮಳೆ ಜೋಡಿಸುವವರೂ ಸಂಪಿವರು" ಎಂದಷ್ಟೇ ಇದ್ದ ಕೈ ಬರಹದ ಪ್ರತಿಯೊಂದು ಗಾಳಿಯಲ್ಲಿ ಬಂದಿತು.

ಹೋಟೇಲ ಹುಡುಗರ ಸಂಪಿದೆ. ಮಳೆ ಜೋಡಿಸುವವರದು ಸಹಾನುಭೂತಿಯ ಸಂಪೆಂದು ತಿಳಿದುಬಂದಿತು ಅವರಿವರನ್ನು ಕೇಳಿದಾಗ.

ಸಲೂನಿನ ಹತ್ತಿರ ಬಂದಾಗಮಾತ್ರ ಅಪರಿಮಿತ ಆನಂದವಾಯಿತು. ಕ್ಯೂ ಇಲ್ಲ! ಮುಂದೆ ಬಂದು ನೋಡಿದ. ಐದೇ ಚದುರಡಿಯ ಕೋಣೆಯಲ್ಲಿ ಐವತ್ತು ತಲೆಗಳನ್ನು ಕೊಳೆಹಾಕಿಯೂ, ಬಾಗಿಲಲ್ಲಿ ಹಣೆಇಕ್ಕಿ ನೋಡಿದ ಐವತ್ತೊಂದನೆಯ ತಲೆಗೂ "ಬನ್ನಿ ಸ್ವಾಮಿ, ಇವರದು ಆಯಿತು" ಎಂದು ಸುಸ್ವಾಗತವೀಯುತ್ತಿದ್ದ ತಲೆ ಕತ್ತರಿಸುವ ಅಂಗಡಿಯ

ಮಾಲಕನು ಬಾಲ ಹೋದ ನರಿಯಂತೆ ಬರೀ ಅಂಗಡಿಯಲ್ಲಿ ಮೂಗಿಗೆ ಬೆರಳಿಟ್ಟು ಕುಳಿತಿದ್ದ. "ಏನು, ನಿಮ್ಮದೂ ರಜೆಯೇ?" ಎಂದ ತಿಂಮ "ಇಲ್ಲ ಸ್ವಾಮಿ, ಕತ್ತಿ ಕತ್ತರಿಗಳ ಸಂಪು" ಕಾರಣವೇನೆಂದು ಕೇಳಿದರೆ "ಅಚ್ಚಿನ ಮಳಿಗಳು ಸಂಪಿವೆ ಸ್ವಾಮಿ. ಅದಕ್ಕೆ ಕತ್ತಿ ಕತ್ತರಿಗಳದು ಸಹಾನುಭೂತಿಯ ಸಂಪು" ಎಂದು ಹೇಳಿ ಬಾಗಿಲು ಹಾಕಿ ಹೊರಡಲ ನುವಾದ ಸಲೂನಿನ ಮಾಲಕ.

"ಆಪದ್ದೆಲ್ಲವು ಒಳಿತೇ ಆಯ್ತು—ಸಂಪಿನ ದಯೆಯಿಂ ಹಣ ಉಳಿದಾಯ್ತು" ಎಂದು ದಾಸರ ದಾಟಿಯಲ್ಲಿ ಹಾಡುತ್ತ, ಬಂದ ಹಾದಿಗೆ ಸಂಪು ಇಲ್ಲವೆಂದು ಮನೆಯ ಹಾದಿ ಹಿಡಿದ. ಮೂರೇ ತಿಂಗಳಹಿಂದೆ "ಮಹಾರಾಟಾ ಮಿಲಿಟರಿ ಪಿನ್ಮೆನ" ಎಂದಿದ್ದ ಹಲಗೆಯ ಹಣೆಬರಹವೇ ಬದಲಾಗಿ "ಗಾಂಧೀ ರಜಕಸೇವಾ" ಆಗಿ ನೇತಾಡುತ್ತಿದ್ದಿತು. ಇಷ್ಟು ದೂರ ಬಂದುದಕ್ಕೆ ಬಟ್ಟೆಗಳನ್ನಾದರೂ ಕೇಳೋಣವೆಂದು ತಿಂಮ ಲಾಂಡ್ರಿಯಲ್ಲಿ ತೂರಿದ. ವೈಲಿಗೆ ಬಟ್ಟೆಗಳ ವೈಲೆತ್ತರದ ಗುಡ್ಡದಮೇಲೆ ಕುಳಿತ ಅಗಸರ ಹನುಮಪ್ಪ ಇಳಿದು ಬಂದು ರಜಕ ವರ್ಗದವರ ಸಂಪಿನ ಮಹಾತ್ಮೆಯನ್ನು ಬಣ್ಣಿಸಿ ಹೇಳಿದ.

"ಅದು ಸರಿ, ನೀವೂ ಏಕಪ್ಪಾ ಸಂಪು ಹೂಡಿದ್ದು?"

"ಕ್ಷೌರಿಕರು ಸಂಪು ಹೂಡಿದ್ದಾರೆ. ನಮ್ಮದು ಸಹಾನುಭೂತಿಯ ಸಂಪು, ಸ್ವಾಮೀ"

"ಹಾಗಾದರೆ ಸದ್ಯ ಬಟ್ಟೆ ಸಿಗುವ ಆಶೆಯಿಲ್ಲ?"

"ಸಂಪು ಮುಗಿದ ಕೂಡಲೇ ಕಳಿಸುತ್ತೇನೆ ಸ್ವಾಮಿ"

"ಎಂದಪ್ಪಾ ಸಂಪು ಮುಗಿಯುವದು?" ಎಂದು ಕೇಳಿದ ತಿಂಮ.

"ಇದೇನು, ಕಡೆವರಿಗೂ ಇರುತ್ತಾ? ಇನ್ನೊಂದು ಸಂಪು ಬರುವ ಒಳಗಾಗಿ ಇದು ಮುಗಿಯುತ್ತೆ" ಎಂದು ಧೈರ್ಯ ಕೊಟ್ಟ ರಜಕ ಶಿರೋಮಣಿ.

## ಹದಿಮೂರು

ಇನ್ನೊಂದು ಸಂಪು ಬೇಗ ಬರಲಿ ಎಂದು ಸಂಪು ಮಾತೆಯನ್ನು ಪ್ರಾರ್ಥಿಸುತ್ತ ತಿಂಮ ಮುಂದೆ ಹೊರಟ.

ಹಾದಿಯಲ್ಲಿ ತಿಂಮನ ತಲೆಗೆ ಒಂದು ಯೋಚನೆ ಹೊಳೆಯಿತು: ಸಂಪಿನಮೇಲೊಂದು ಹರಟೆ ಬರೆದರೆ ಹೇಗೆ ಎಂದು. ಕೂಡಲೇ ಅವನ ನೆನಪಿಗೆ ಬಂದಿತು, ಮೂರು ತಿಂಗಳ ಹಿಂದೆ ಒಂದು ಹರಟೆಯನ್ನು ಪತ್ರಿಕೆಗೆ ಕಳಿಸಿದ್ದು. ಉತ್ತರವೇ ಇಲ್ಲ! ಆದರೆ ಒಂದು, ಸಂಪಾದಕರಬಗ್ಗೆ ಎಷ್ಟೆಷ್ಟು ಜನರು ಏನೇನೋ ಆಡಿಕೊಂಡರೂ ಬರೆಹಗಾರರಿಗೆ ಒಮ್ಮೊಮ್ಮೆ ಉತ್ತರವನ್ನು ಸಹ ಬರೆಯುವ ಸಂಪಾದಕರು ಒಬ್ಬಿಬ್ಬರಾದರೂ ಜಗಲೂ ಇರಬಹುದೆಂದು ತಿಂಮನಿಗೆ ಮಾತ್ರ ಪೂರ್ಣ ವಿಶ್ವಾಸ. ಲಂಚಖೋರತನವನ್ನು ನಿಲ್ಲಿಸುವ ಸರಕಾರವು ಬರುವ ಮುನ್ನವೇ ಕೊಂಚ ಕೊಟ್ಟಿಟ್ಟಿದ್ದ ಅಂಚೆಯವನಿಗೆ. ಇಂದು ಸಂಪಾದಕರ ಪತ್ರವು ಬಂದೇಬರುವದೆಂದು ಅವನ ಒಳದನಿ ಹೇಳಿತು. ಅದು ಮಾತ್ರ ಎಂದಿಗೂ ಸುಳ್ಳಾಗದು ಎಂದು ಮನೆಗೆ ಬಂದವನೆ ನೇರವಾಗಿ ಮೇಜಿನ ಮುಂದೆ ನಿಂತ. ಏನಿದೆ ಅಲ್ಲಿ? ರೂಪ ಭೇದ ಹೊಂದಿದ ಅಂಚೆಯವನು ಸಮವಸ್ತ್ರ ಭುಜಚೀಲ ರಹಿತನಾಗಿ ರಸ್ತೆಯಲ್ಲಿ ನಡೆದಿದ್ದ. ಹೊರ ಬಾಗಿಲಿಗೆ ಓಡಿ ಬಂದು ಏನು ಸಮಾಚಾರವೆಂದು ವಿಚಾರಿಸಿದ. "ಅಂಚೆ ಜವಾನರ ಸಂಪು ಸ್ವಾಮಿ, ಇವತ್ತು" ಎಂದ. ಏಕೆ ಎನ್ನುವ ಮುಂಚೆಯೇ ಮುಂದುವರಿಸಿದ "ನಮ್ಮ ಸಮವಸ್ತ್ರಗಳನ್ನು ಪ್ರತಿವರ್ಷವೂ ಒಗೆಯುವ ಅಗಸರು ಸಂಪು ಹೂಡಿದ್ದಾರೆ! ಅವಕ್ಕೆ ನಮ್ಮದು ಸಹಾನುಭೂತಿಯ ಸಂಪು"

ಎದ್ದ ವೇಳೆ ಚನ್ನಾಗಿಲ್ಲವೆನಿಸಿತು ತಿಂಮನಿಗೆ. ಉಸ್ಸೆಂದು ಉಸಿರು ಬಿಟ್ಟು ಹೊರಟ ಒಳಗೆ, ಊಟವನ್ನಾದರೂ ಮುಗಿಸಿ ಏಳೋಣವೆಂದು. ಅಡಿಗೆ ಮನೆಯಲ್ಲಿ ಕಾಲಿಟ್ಟಕೂಡಲೆ ಹೊಟ್ಟೆ ತುಂಬಿತು. ಒಲೆಯನ್ನು ಕೂಡ ಹೊತ್ತಿಸಿರಲಿಲ್ಲ!

"ಎಲ್ಲಿಯೇ ಕೃಷ್ಣ?" ಎಂದು ಸಿಟ್ಟಿಗೆ ಹಸಿವೆ ಸೇರಿಸಿ ತಿಂಮ ಕೂಗು ಹಾಕಿದ

## ಹದಿನಾಲ್ಕು

"ಎಲ್ಲಿದ್ದಾನೆ ಕೃಷ್ಣ?" ಎಂದು ಉತ್ತರವಾಗಿ ಕೇಳಿದಳು, ಮುಸುಗಿಕ್ಕಿ ಮಲಗಿದ್ದ ಮಹರಾಯಿತಿ ಎದ್ದು ಕುಳಿತು.

"ಅದನ್ನೇ ನಾನು ಕೇಳಿದ್ದು. ಅಡಿಗ ಇಲ್ಲವೇ ಇವತ್ತು?"

"ಊರಿಂದ ಬಂದ ಕಾಗದಗಳನ್ನು ತಂದುಕೊಡುವ ಅಂಚೆಯವನೇನೋ ಸಂಪು ಹೂಡಿದ್ದಾನಂತಲ್ಲ? ಅದಕ್ಕೇ ಅಡಿಗೇ ಹುಡುಗರದೂ ಸಹಾನುಭೂತಿಯ ಸಂಪಂತೆ. ಆಗಲೇ ಮೆರವಣಿಗೆಯ ಹಿಂದೆ ಓಡಿದ"

"ಚೆನ್ನಾಗಿದೆ ಗ್ರಹಚಾರ. ಕೊಂಚ ಕಾಫಿಯನ್ನಾದರೂ ಮಾಡು ಬಿಡು. ಹೀಗೇಕೆ ಮಲಗಿದಿ, ನೀನೂ ಸಹ ಸಂಪೇನು?"

"ಕಾಫಿ ಇಲ್ಲದುದಕ್ಕೇ ಮಲಗಿದ್ದು"

"ಕಾಫಿ ಏಕೇ ಇಲ್ಲ?"

"ಹಾಲು?"

"ಹಾಲಿನವನಿಗೆ ಏನು ರೋಗ ಬಂದಿತು?"

"ಮುನಿಸಿಪಾಲ್ಟಿ ಸೇರಿನ ಖಾತೆ ಕೆಲಸಗಾರರ ಸಂಪಂತಲ್ಲ?"

"ಆದರೆ?"

"ಹಾಲು ಬೆರಸೋಕೆ ನೀರೇ ಇಲ್ಲದಿದ್ದರೆ ಅವನು ಮಾತ್ರ ಹೇಗೆ ಹಾಲು ಮಾರ್ತೋನು? ಆಗಲೆ ಬಂದು ಹೇಳಿಹೋದ. ಅವನದೂ ಸಹಾನುಭೂತಿಯ ಸಂಪಂತೆ."

ಈ ಸಂಪಿನ ಸಾಂಕ್ರಾಮಿಕ ರೋಗ ಬಸ್ಸಿನವರಿಂದಲೇ ಹುಟ್ಟಿದ್ದೆಂದು ಶಪಿಸುತ್ತ ನೇರವಾಗಿ ಬಸ್ಸಿನ ಕಚೇರಿಗೆ ಹೊರಟು ಕುಡುಗೋಲು ಸುತ್ತಿಗೆ ಹಿಡಿದು ಕುಳಿತ ಕಾಮಿಯೊಬ್ಬನನ್ನು ಕೇಳಿದ ಬೇಸತ್ತ ತಿಂಮ.

"ಏಕಯ್ಯಾ, ನೀವು ಸಂಪು ಹೂಡಿದ್ದೀರಿ?"

**ಹುಚ್ಚು—ಹುರುಳು**

" ಹಾಲು ಮಾರುವವರು ಸಂಪು ಹೂಡಿದ್ದಾರೆ. ನಮ್ಮದು ಸಹಾನುಭೂತಿಯ ಸಂಪು " ಎಂದು ಹೇಳಿದ ಅವನು.

ಇನ್ನಾರನ್ನು ಕೇಳುವದು ? ಎಲ್ಲರೂ ಸಹಾನುಭೂತಿಯ ಸಂಪು ಎಂದು ಸಹಾನುಭೂತಿಯನ್ನೇ ತೋರಿಸುತ್ತಿದ್ದಾರೆ. ಇಷ್ಟು ಸಂಪುಗಳೂ ಅವನೊಬ್ಬನವೇ ! ಯಾರೋ ಆ ಮಹಾರಾಯ ಸಹಾನುಭೂತಿ ? ಆಷಾಢ ಭೂತಿಯ ಅಪ್ಪನೇನಾದರೂ ಇರಬಹುದೇ ? ಎಂದು ತಿಂಮ ತಲೆ ಕೆಳಗಾದ !



## ಛೀ! ಡಾಕ್ಟರದೇನು ತಪ್ಪು?

ಸಿನೇಮಾ ನೋಡುವ ಹುಚ್ಚು ಕೊಂಚ ಹೆಚ್ಚು ತಿಂಮನಿಗೆ ಮೊದಲಿನಿಂದಲೂ. ಕೈಯಲ್ಲಿ ಕೆಲಸವಿಲ್ಲದಾಗ ಬೇಸರವೆನಿಸಿ ಸಿನೇಮಾಕ್ಕೆ ಹೊರಟರೆ, ಕೆಲಸ ಹೆಚ್ಚಾದಾಗ ಮನರಂಜನೆಗಾಗಿ ಸಿನೇಮಾಕ್ಕೆ ಹೊರಡುವದು. ಗೆಳೆಯರು ಬಂದರೆ ಗೆಳೆಯರಿಗಾಗಿ ಹೋಗುವದು. ಯಾರೂ ಬಾರದಿದ್ದರೆ ಒಬ್ಬನೇ ಕುಳಿತು ಮಾಡುವದೇನೆಂದು ಹೋಗುವದು. ಚೆನ್ನಾಗಿದೆ ಎಂದು ಎಲ್ಲರೂ ಅಂದರಂತೂ ಅದನ್ನು ನೋಡಲೇ ಬೇಕು; ಚೆನ್ನಾಗಿಲ್ಲುದುದು ಏಕೆ ಅಥವಾ ಎಲ್ಲಿ ಚೆನ್ನಾಗಿಲ್ಲವೆಂದು ನೋಡಬೇಕಾಗುತ್ತದಷ್ಟೆ?

....ಟಕ್!....ಫಿಲಂ ಹರಿಯಿತು. ಹಿಂಪೆಯೇ ದೀಪವೂ ಹತ್ತಿತು. ನೀರು ತುಂಬಿದ ಕಣ್ಣನ್ನು ಕರವಸ್ತ್ರದಿಂದ ಒರಿಸುತ್ತ ತಿಂಮಸುತ್ತಲೂ ನೋಡಿದ. ಮುಂದಿನ ಕುರ್ಚಿಯಲ್ಲಿ ಪ್ರತ್ಯಕ್ಷ, ಡಾಕ್ಟರರು!

"ಓಹೋ, ಬಂದಿದೀರಾ?"

"ಬಂದಿದೇನಯ್ಯಾ ತಿಂಮಾ, ಸದ್ಯ ರೋಗಿಗಳು ರಜೆ ಕೊಟ್ಟರು. ಕಣ್ಣು ಏನಾಗಿದೆ?" ಎಂದು ಕೂಡಲೆ ತೋರಿದರು ಜಾತಿಯ ಬುದ್ಧಿ.

"ರೋಗಿಗಳು ರಜೆ ಕೊಟ್ಟರೂ, ನೀವು ಅವರಿಗೆ ರಜೆ ಕೊಡುವಂತಿಲ್ಲವಲ್ಲ? ನನ್ನ ಕಣ್ಣಿನ ಚಿಕಿತ್ಸೆ ವಿಷಯ ಈಗೇಕೆ" ಎಂದ ತಿಂಮ.

"ಅದಿರಲಿ ಬಿಡು. ಕಣ್ಣೇಕೆ ಅಷ್ಟು ಕೆಂಪಡರಿದೆ? ಈ ಚಿಕ್ಕ ವಯಸ್ಸಿಗೇ ಹೀಗಾದರೆ ಹೇಗೆ? ಹೋಗಿ ಬಾರಯ್ಯ ಒಂದುಬಾರಿ, ಬೆಂಗಳೂರಿಗೆ. ಕಣ್ಣು ಪರೀಕ್ಷೆಯಾಗಬೇಕು. ಕನ್ನಡಕ ತೊಟ್ಟರಂತೂ ಇನ್ನೂ ಒಳಿತು; ಮೂಗಿಗೊಂದು ಆಭರಣ" ಎಂದು ಡಾಕ್ಟರರು ತಿಂಮನ ಬೆನ್ನುಹತ್ತಿದರು.

ಅವರು ಹೇಳಿದುದು ಇವನ ಕಣ್ಣಿನ ಕಿವಿಗೆ ಹೇಗೆ ಕೇಳಿತೋ? ನೀರೊಡೆಯುವದು ಮಾತ್ರವಲ್ಲದೆ ನೋವೂ ಸುರುವಾಯಿತು. ಮತ್ತೇನಾದರೂ ಪ್ರಮಾದವಾದೀತೆಂದು ದಿನ ಕಳೆಯದೆ ರೈಲನ್ನೇರಿ ತಿಂಮ ಬೆಂಗಳೂರಲ್ಲಿ ಬಂದಿಳಿದ. ಹಳೆಯ ಗೆಳೆಯರೂ ಹೊಸ ಬಂಧುಗಳೂ ತುಂಬಿದ ಬೆಂಗಳೂರಲ್ಲಿ ಆದರಕ್ಕೇನು ಕೊರತೆ! "ನನ್ನ ಹದಿಮೂರನೇ ಮಗಳು ಪಿಟೀಲು ಬಾರಿಸುತ್ತಾಳೆ, ಕೊಂಚ ಕೇಳಿ ಹೋಗಿ" ಎಂದು ಒಬ್ಬರ ಆಗ್ರಹ; "ನನ್ನ ಇಪ್ಪತ್ತೈದನೆಯ ಮಗನಿಗೆ ಚಿಕ್ಕ ಕತೆಗಳ ಸ್ಪರ್ಧೆಯಲ್ಲಿ ಹದಿನೇಳನೇ ಬಹುಮಾನ ದೊರೆತಿದೆ. ಆ ಕತೆಯನ್ನಿಷ್ಟು ಓದಿ ಹೋಗಿ, ಮೂವತ್ತೇ ಪುಟಗಳ ಚಿಕ್ಕಕತೆ" ಎಂದಿನ್ನೊಬ್ಬರ ದುಂಬಾಲು. "ಮಲ್ಲೇಶ್ವರದಲ್ಲಿ ಮನೆಕಟ್ಟಿಸಿದ್ದೇನೆ – ಯುದ್ಧಕಾಲದಲ್ಲಿ – ಮಹಾಸ್ವಾಮಿಗಳು ಕೊಂಚ ಪಾದಧೂಳಿ ಅನುಗ್ರಹಿಸಿ" ಎಂದು ಮತ್ತೊಬ್ಬರ ಪ್ರೇಮದ ಪ್ರದರ್ಶನ. ಊಟದ ಮಾತು ??? ಇರಲಿ ಬಂದ ಕೆಲಸ ಮೊದಲು ಆಗಲಿ ಎಂದು ತಿಂಮ ಡಾಕ್ಟರ ಗೆಳೆಯರು ಕೊಟ್ಟ ಪತ್ತೆಯ ಪತ್ತೆ ಹಚ್ಚಿ ಕಣ್ಣು ವೈದ್ಯರ ಕಣ್ಣಮುಂದೆ ನಿಂತ. ಅವರೇನು ಗಂಟೆಗಟ್ಟಲೆ ಕಾಯಿಸಲಿಲ್ಲ, ಪಾಪ! ಅವರು ಖಾಸಗಿ ವೈದ್ಯರು ತಾನೆ? ಗೌರವ ಕಾಣಿಕೆ ಸಲ್ಲಿಸಿದ ಕೂಡಲೆ ಸಿಗರೇಟಿನ ಮುಖಕ್ಕೆ ಬೆಂಕಿ ಹಚ್ಚಿ, ಹಿಂದೆ ಬರಲು ಕೈಸನ್ನೆ ಮಾಡಿ ಒಳನಡೆದರು. ಕತ್ತಲ ಕೋಣೆಯಲ್ಲಿ—ಬೆಳಕಿನ ಸಹಾಯದಿಂದ—ಕಣ್ಣನ್ನು ಪರೀಕ್ಷಿಸಿ, ಎರಡು ಬೆಂಕಿಯ ಹನಿಗಳನ್ನು ಕಣ್ಣಲ್ಲಿ ಹಾಕಿ, "ಮೂರು ದಿನಗಳು ಹೀಗೆಯೇ ಇರಿ" ಎಂದು ಆಶೀರ್ವದಿಸಿ

ಮಾಯವಾದರು. ಮೂರು ದಿನಗಳ ನಂತರ ಬಿಡುಗಡೆ ಮಾಡಿ ಕರುಣ ಪ್ರಸಾದ ಬೀರಿದರು.

"ಇದು ಕಣ್ಣಿನ ದೋಷವಲ್ಲ. ಮೂಗು ಪರೀಕ್ಷೆಯಾಗಬೇಕು." ಮೂಗಿನ ವೈದ್ಯರಾದ ಡಾ....ರವರ ಬಳಿ ಹೋಗಿ."

ತಿಂಮ ಮೂಗಿನ ವೈದ್ಯರಿಗೆ ಗೌ।ಕಾ ಸಲ್ಲಿಸಿ ಕೈಮುಗಿದ. ಅವರ ಪರೀಕ್ಷೆಯ ರೀತಿಯೇ ಮೆಚ್ಚುವಂತಿತ್ತು. ತಲೆಕೆಳಗೆ ಮಾಡಿ ಮಲಗಿಸಿ ಮೂಗಿನಲ್ಲೊಂದು ಲಾಳಿಕೆ ಇಟ್ಟರು. ಮೂರು ದಿನಗಳ ಸ್ನಾನ ಬದ್ಧತೆ ಮುಗಿದ ಮೇಲೆ ಅವನ ಕೈಬಿಟ್ಟರು.

"ಮೂಗಿನದೇನೂ ತಪ್ಪಿಲ್ಲ. ಗಂಟಲ ವೈದ್ಯರಾದ ಡಾ....ರವರನ್ನು ಮಾತ್ರ ಕೂಡಲೆ ನೋಡಿರಿ."

ಗಂಟಲ ವೈದ್ಯರಿಗೆ ಗೌ।ಕಾ ಸಲ್ಲಿಸಿ ಮುಂದ ಕುಳಿತ. ತಲೆಗೊಂದು ಕನ್ನಡಿ ಕಟ್ಟಿಕೊಂಡು, ಗಂಟಲಲ್ಲಿ ದೀಪ ಹಚ್ಚಿ, ಬಾಯಿ ತೆರದೇಇಡಿ ಎಂದು ವಿಜ್ಞಾಪಿಸಿಗೊಂಡು, ಕೂಡಲೆ ಹೆಸರು ಕೇಳಿದರು. ಬಾಯಿ ತೆರೆವೇ ತಿಂಮ ಎಂದು ಅನ್ನುವದಾದರೂ ಹೇಗೆ?

"ಗಂಟಲು ತಾರಿನ ಹೆದ್ದಾರಿಯಂತಿದೆ; ಏನೂ ದೋಷವಿಲ್ಲ. ದಂತವೈದ್ಯರಾದ ಹ।ಡಾ....ರವರ ಬಳಿ ಹೋಗಿಬನ್ನಿ."

ಇಕ್ಕಳ ಕೈಯಲ್ಲಿ ಹಿಡಿದು ಸರ್ಕಸಿನ ಹುಲಿಯನ್ನು ಸಾಧುಮಾಡುವ ರಿಂಗಮಾಸ್ಟರಸಂತೆ ಸಿಂತಿದ್ದ ಹಲ್ಲು ಕೀಳುವ ವೈದ್ಯರನ್ನು ಕಂಡ ಕೂಡಲೆ ತಿಂಮನ ಎದೆಯೇ ಹಾರಿತು. ಲಂಚಗುಳಿತನದಮೇಲೆ ಲೆಕ್ಚರ್ ಏನು, ಗಂಟೆಗಟ್ಟಲೆ ಯಾರೂ ಮಾಡಬಹುದು. ಆ ಸ್ಥಿತಿಯಲ್ಲಿದ್ದಾಗ ಮಾತ್ರ ಯಾವ ಮನುಷ್ಯನ ನೀತಿಯು ಮಟ್ಟವೇ ಬದಲಾಗಲಿಕ್ಕಿಲ್ಲ? ಕೊಂಚ ಭೂತದಯೆ ಇರಲೆಂದು ಗೌ।ಕಾವನ್ನು ಎರಡರಷ್ಟು ಕೊಟ್ಟು, ಅವರು ತೋರಿಸಿದ ಮರಣಸಿಂಹಾಸನವನ್ನು ಅಲಂಕರಿಸಿದ. ಗೋಡೆಯಲ್ಲಿ ನಟ್ಟ ಗೂಟವನ್ನು ಕೀಳಲು ಅಲ್ಲಾಡಿಸಿದಂತೆ ಆ ಹಲ್ಲಿನ ಬ್ರಹ್ಮರು ಹಲ್ಲನ್ನು

ಅಲ್ಲಾಡಿಸಿದಾಗ ಪ್ರಾಣವೇ ಹೋದಂತಾಗಿ ತಿಂಮ 'ಐ' ಎಂದಾಗಲಿಲ್ಲ. "ನೋಡುತ್ತೇನೆ, ಅಷ್ಟೆ" ಎಂದು ಧೈರ್ಯ ಹೇಳುತ್ತಿದ್ದರು.

"ಸಿನೇಮಾ ನೋಡುವಾಗ ಕಣ್ಣಲ್ಲಿ ನೀರು ಬರುತ್ತೆಯೋ ?" ಎಂದು ಪ್ರಶ್ನೆ ಕೇಳಿ, ಉತ್ತರ ಹೇಳುವ ಮುನ್ನವೇ ಅವನ ಬಾಯಿಯಲ್ಲಿ ಸಲಿಕೆ, ಗುದ್ದಲಿ, ಪಿಕಾಸಿಗಳನ್ನಿಟ್ಟಿದ್ದರು. ಕಣ್ಣಿಗೆ ಕಣ್ಣಬೇನೆ ಆದರೆ ಹಲ್ಲಿಗೇನು ಹೊಟ್ಟೆಬೇನೆಯೇ ? ಆಗಾಗ್ಗೆ ಪ್ರಾಣವು ಹಾರುವಂತಾಗುತ್ತಿತ್ತು ತಿಂಮನಿಗೆ.

"ಹಲ್ಲಿನ ಬುಡದಲ್ಲಿ ದೋಷವಿರಬಹುದು. ಎಲ್ಲವನ್ನು ಕೀಳಬೇಕು" ಎಂದು ನುಡಿಯುವಾಗಲೆ ಹಲ್ಲಿನೊಡನೆ ಜಂಗೀ ಕುಸ್ತಿ ಹಿಡಿದೆ ಬಿಟ್ಟರು. ಮೂರು ದಿನಕ್ಕೆ ನಾಲ್ಕು ಹಲ್ಲಿನಂತೆ ಮೂರು ವಾರಗಳಲ್ಲಿ ಬಾಯಿ ಬೋಳು ಮಾಡಿ ಕೈ-ಅಲ್ಲ-ಬಾಯಿ ಬಿಟ್ಟರು. ಆಮೂಲಾಗ್ರವಾಗಿ ಕಿತ್ತಿದ ಮೂವತ್ತೆರಡು ಹಲ್ಲುಗಳನ್ನೂ ವಜ್ರ ಕೊಳ್ಳುವವರು ನೋಡುವಂತೆ ತಿರುತಿರುವಿ ನೋಡಿ ಕಡೆಗೆ ಜಜ್ಮೆಂಟು ಕೊಟ್ಟರು. ಅವನ ದುರ್ದೈವ! ಒಂದು ಹಲ್ಲಿನ ಬುಡದಲ್ಲಿಯಾದರೂ ದೋಷವಿರಬಾರದೇ ?

"ಹಲ್ಲುಗಳು ಚೆನ್ನಾಗಿವೆ; ಆಯಿತೇ ?" ಎಂದರು.

ತನ್ನ ಬಾಯಿಲ್ಲಿ ಇಲ್ಲದ ಮೇಲೆ ಆ ಹಲ್ಲುಗಳು ಇದ್ದರೇನು—ಸತ್ತರೇನು. "ಆಯಿತು" ಎಂದು ತೊದಲಿದ. ಹಲ್ಲು ಕೀಳುವದು ಆಯಿತು ಸದ್ಯ.

"ನರಗಳ ದೋಷವಿರಬಹುದು. ನೀವು ನ್ಯುರಾಲಜಿಸ್ಟರಾದ ಡಾ॥....ರವರ ಬಳಿ ಹೋದರೆ ಆದೀತು" ಎಂದು ಬೀಳ್ಕೊಟ್ಟರು.

"ಅವರು ನರಗಳನ್ನು ಕೀಳುತ್ತಾರೆಯೋ ?" ಎಂದು ಕೇಳಲು ಸಂಕೋಚವಾಯಿತು ತಿಂಮನಿಗೆ. ದಂತವೈದ್ಯರ ಸೊಟ್ಟಬಟ್ಟಲುಗಳಲ್ಲಿದ್ದ ತನ್ನ ಹಲ್ಲುಗಳನ್ನು ಕಡೆಯಬಾರೊಮ್ಮೆ ನೋಡಿದ ಕರುಣೆಯಿಂದ.

"ಗಟ್ಟಿಗರು ಸ್ವಾಮಿ, ನೀವು. ಹಲ್ಲು ಹಣ ಕೂಡ ಒಂದೇ ಬಾರಿ

ಕಿತ್ತಿದಿರಿ ” ಎಂದು ಅವರ ಮುಖಕ್ಕೇ ಹೇಳಿದ. ಅವರದೇನು ಭಯ, ಬಾಯಿ ಬರಿದಾದಮೇಲೆ ?

“ಬೇಕಾದರೆ ನನ್ನ ಹಲ್ಲನ್ನು ಕೊಡುತ್ತೇನೆ; ಗೌಕಾ ಕೊಟ್ಟರೆ ” ಎಂದರು.

ಗೌಕಾ ಕೊಟ್ಟು ನರ ವೈದ್ಯರ ಮುಂದೆ ನಿಂತ. ಆದರ ಸತ್ಕಾರ ಮಾಡಿ, ತಮ್ಮ ಹೆಂಡತಿಯು ತಮ್ಮನ್ನೋ ಎಂಬೋ ಹಾದಿಯಲ್ಲಿ ಕೈಹಿಡಿದು ಕುಳ್ಳಿರಿಸಿದರು. ಸಿನೇಮಾದಲ್ಲಿ ಕುಳಿತಾಗ ಕಣ್ಣಲ್ಲಿ ನೀರು ಬಂದಂದಿನಿಂದ ದಂತವೈದ್ಯರು ಜೀವದಾನ ಮಾಡಿರುವವರೆಗೂ ತನ್ನ ಆತ್ಮಕತೆಯನ್ನು ಅವರಿಗೆ ಅರುಹಿದ. ಅಂತೂ, ನರವನ್ನು ಸಹ ಕೇಳದಲೆ ಸದ್ಯ ಕೈಬಿಟ್ಟರು.

“ನಿಮಗೆ ಎಲ್ಲ ನರಗಳೂ ಇವೆ. ಇದು ನರಗಳ ದೋಷವಲ್ಲ. ಪೆಥಾಲಜಿಸ್ಟರಾದ ಡಾ....ರವರ ಬಳಿ ಹೋಗು. ಅವರು ರಕ್ತ ಪರೀಕ್ಷೆ ಮಾಡುತ್ತಾರೆ ” ಎಂದು ನಮಸ್ಕಾರ ಸೂಚಿಸುವ ನಗು ನಕ್ಕರು.

ರಕ್ತಪರೀಕ್ಷೆ ಎಂದ ಕೂಡಲೆ ಮೈ ಜುಮ್ಮೆಂದಿತು ತಿಂಮನಿಗೆ. ಹಾಲಿನ ತನಿಖೆ ಇನ್ಸ್‌ಪೆಕ್ಟರು ಹಾಲನ್ನು ಪರೀಕ್ಷೆ ಮಾಡುವಾಗೊಮ್ಮೆ ನೋಡಿದ್ದ. ಆ ಗಾಜಿನ ಲಟ್ಟಣಿಗೆ ( Lactometer ) ಮುಳುಗುವಷ್ಟು—ಸುಮಾರು ಮದರಾಸಿನ ಎರಡು ಪಡಿ ಅನ್ನಿ, ರಕ್ತವನ್ನು ತೆಗೆಯುತ್ತಾರೆಯೇ ಮೈಯಿಂದ? ತಿಂಮ ಮೊದಲೇ ವಿರಕ್ತ !

ಗೌಕಾ ಮುಂದಿಟ್ಟು ಕೈ ತಿಕ್ಕುತ್ತ ರಕ್ತ ವೈದರನ್ನು ಕೇಳಿದ.

“ಬಹಳ ಏತಕ್ಕೆ ? ನಾವೇನು ಬಡವರ ರಕ್ತ ಹೀರುವ ಬಾಂಡವಲು ಶಾಹಿಗಳೇ ?” ಎಂದು ನಗೆಯಾಡಿ “ನಿಮಗೇನೂ ನೋವು ಆಗದು. ತಿಗಣೆ ಕಡಿತಂತೆ ಆದೀತು ” ಎಂದು ಅವನನ್ನು ಇನ್ನೂ ಅಂಜಿಸಿಬಿಟ್ಟರು.

“ಹಾಗಾದರೆ ರಾತ್ರಿಯೆಲ್ಲವೂ ಜಾಗರಣೆ ಅನ್ನಿ ” ಎಂದು ಮುಖ ನೋಡಿದ.

## ಇಪ್ಪತ್ತೊಂದು

ಸೂಜಿಯನ್ನು ತೋರಿಸಿ ಅವನ ಮಾತನ್ನು ಅಲ್ಲಿಗೇ ನಿಲ್ಲಿಸಿದರು. ಚಿಕ್ಕ ಗಾಯದಿಂದ ರಕ್ತವನ್ನು ತೆಗೆದು ಗಾಜಿಗೆ ಹಚ್ಚಿ, ಗಾಜಿನ ಬುಡದಲ್ಲಿಕ್ಕಿ, ಕಣ್ಣಿಗೆ ಗಾಜನ್ನಿಕ್ಕಿ ಮೂರು ಮೂರು ಬಾರಿ ಒಂದೊಂದೇ ಕಣ್ಣಿಂದ ನೋಡಿ "ನಿನ್ನನ್ನು ಕ್ಷಮಿಸಿದ್ದೇನೆ ನಡೆ" ಎಂದು ನ್ಯಾಯಾಧೀಶರು ಹೇಳುವ ದನಿಯಲ್ಲಿ ನುಡಿದರು. "ನೀವು ತಕ್ಷಣ ಚರ್ಮವೈದ್ಯರಾದ ಡಾ||....ರವರ ಬಳಿ ಹೋಗಬೇಕು" ಎಂದು ವಿನಯದಿಂದ ಅರಿಕೆ ಮಾಡಿಕೊಂಡರು. ರಕ್ತ ಹೀರುವವರಿಗೆ ಚರ್ಮ ಸುಲಿಯುವವರೇ ನೆಂಟರು!

ಚರ್ಮ ಸುಲಿಯುವವರಿಗೆ ಹಣ ಸುಲಿವುದು ಯಾವ ದೊಡ್ಡ ಮಾತು? ಗಾ|ಕಾ| ಮೇಜಿನ ಮೇಲಿಕ್ಕಿ ಎಷ್ಟು ಚರ್ಮದಲ್ಲಿ ಪದರುಗಳಿಷ್ಟಿವೆ ಎಂದು ವಿಚಾರಿಸಿದ ತಿಂಮ.

"ಏನೂ ಅಂಜಬೇಡಿ, ಏಳು ಪದರುಗಳಿವೆ" ಎಂದರು. ಆರು ಪದರುಗಳವರೆಗೂ ಚರ್ಮಾಪಹರಣವಾದರೂ ಆಗಲಿ, ಸದ್ಯ ಸಿನೇಮಾ ನೋಡುವಾಗ ಕಣ್ಣಲ್ಲಿ ನೀರು ಬಾರದಿದ್ದರೆ ಸಾಕು ಎಂದು ಧೈರ್ಯಮಾಡಿ ಕುಳಿತ. ಬೂಟನ್ನುಚ್ಚಿ ಎಂದು ಕಾಲು ತೋರಿಸಿದರು.

ಕಣ್ಣು ಕೆಂಪು ಮಾಡಿ "ಯಾರ ಬೂಟನ್ನು?" ಎಂದ. "ನಿಮ್ಮ ಬೂಟನ್ನೇ" ಎಂದು ಆಮೇಲೆ ಹೇಳಿದರು.

"ನನ್ನ ಕಣ್ಣು... ಕಾಲಲ್ಲಿಲ್ಲ" ಎಂದು ತಿಂಮ ಗೊಣಗುಟ್ಟಿದ.

"ಅದುದು ಸ್ವಾಮಿ, ನೀರು ಕಣ್ಣಲ್ಲಿ ಬಂದರೂ ಊಟೆ ಅಂಗಾಲಲ್ಲಿ ಇದೆಯಲ್ಲ?" ಎಂದು ನಗುತ್ತ ಅಂಗಾಲಿನಲ್ಲಿದ್ದ ಒಣಗಿದ ಚರ್ಮದ ಹುಡಿಯ ಚೂರೊಂದನ್ನು ಚಿಮ್ಮಟಿಯಲ್ಲಿ ತೆಗೆದು ಹದಿನೇಳು ಬಣ್ಣಗಳ ಹದಿನೆಂಟು ದ್ರಾವಕಗಳಲ್ಲಿ (ಒಂದು ನೀರು-ಅದಕ್ಕೆ ಬಣ್ಣವಿಲ್ಲವಲ್ಲ!) ಅದ್ದಿ ತೆಗೆದು, ನೀವು ಹೊರಡಬಹುದು ಎಂದರು. ಅನುಮಾನಿಸುತ್ತ "ಈ ಬೂಟು?" ಎಂದ ತಿಂಮ. ಕರೀ ಮಾರ್ಕೆಟ್ಟಿನಲ್ಲಿ ಕೊಂಡ ಕರೀ ಬೂಟು ಅದು. ಬೂಟನ್ನು ಒಯ್ಯಲು ಅನುಮತಿ ಕೊಟ್ಟು 'ನೀವು

ಜೋನ್ಸೆಟ್ಟರ ಬಳಿಹೋಗಿ' ಎಂದು ಸೂಚಿಸಿದರು.

"ಯಾರು ಆ ಸೆಟ್ಟರು. ಸೀತಾರಾಮಸೆಟ್ಟರ ಮಕ್ಕಳೋ?" ಎಂದು ಕೇಳಿದ.

"ಸೆಟ್ಟರೆಂದರೆ ಸಿಪ್ಸ್ಯಾರ ಸೆಟ್ಟರಲ್ಲ. ಜೋನ್ಸೆಟ್ಟರೆಂದರೆ ಎಮಿಕೆ ಕೂಡಿಸುವವರು ಎಂದರ್ಥ" ಎಂದು ತಿಳಿಹೇಳಿ ಅವರ ಪತ್ತೆ ಕೊಟ್ಟರು.

ಕಣ್ಣಲ್ಲಿ ಜೆಂಕಿಯ ಹಸಿಹಾಕಿ, ಮೂಗಿನಲ್ಲಿ ಲಾಳಿಕೆ ಇಟ್ಟು, ಗಂಟಲಲ್ಲಿ ದೀಪ ಹಚ್ಚಿ, ಹಲ್ಲು ಕಿತ್ತಿ, ರಕ್ತ ಹೀರಿ, ಚರ್ಮ ಸುಲಿದರೂ ಅಂಜದ ತಾನು ಎಲುಬಿನ ವೈದ್ಯರಿಗೆಲ್ಲ ಅಂಜುತ್ತಾನೆಯೇ? ತನ್ನ ಎಲುಬನ್ನು ಪುಡಿ ಮಾಡುವದು ಈ ವೈದ್ಯರಿಂದೇನಾಗುತ್ತದೆ, ಅವರ ತಲೆ? ಮೂರನೆಯ ವರ್ಗದ ಡಬ್ಬಿಯಲ್ಲಿ ಒಂದೇ ಕಾಲಮೇಲೆ ನಿಂತು ಮೂರು ನೂರು ಮೈಲುಗಳು ಪ್ರಯಾಣ ಮಾಡಿದರೂ ಪುಡಿಯಾಗದ ಇವನ ಅಸ್ತಿಗೆ ಜಮಷೇಪಪುರದ ತಾತಾ ಕಾರ್ಖಾನೆಯ ಕಬ್ಬಿಣವೂ ಸಾಟಿಯಾಗಲಾರದು.

ಅಸ್ತಿ ವೈದ್ಯರೇ ಕಡೆಯ ವೈದ್ಯರಿರಬಹುದೆಂದು ಉದಾರ ಹಸ್ತದಿಂದ ಸೌಕಾ ಕೊಟ್ಟು ಆಲ್ ರೌಂಡ್ ಇದ್ದ ಅವರನ್ನೇ ನೋಡುತ್ತ ಕುಳಿತುಗೊಂಡ. ಒಂದಾದರೂ ಎಲುಬಿರಬೇಡವೇ, ಎಲುಬಿನ ವೈದ್ಯರೆಂದರೆ? ಕಾಳಿಸ ಮೂಟಿಗೆ ಹಾಕುವ ಸಕ್ಕರೆ ಗುತ್ತನ್ನು ಆ ಡಾಕ್ಟರ ಮೈಯಲ್ಲಿ ಎಲ್ಲಿ ತಿಪದರೂ ಒಂದು ಮೂಳೆಯೂ ಸಿಗಲಿಕ್ಕಿಲ್ಲ!

"ಏನಾಗಿದೆ?" ಎಂದರು. ಸಿನೇಮಾ ನೋಡುವಾಗ ಕಣ್ಣಲ್ಲಿ ನೀರು ಬಂದ ಸಂಗತಿಯನ್ನು ವಿವರವಾಗಿ ತಿಳಿಸಿದ.

ಮಂಚದ ಮೇಲೆ ಮಲಗಿಸಿ, ಚೌಕಸಿ ಗಿರಾಕಿಯು ತೆಂಗಿನ ಕಾಯಿಯನ್ನು ಬಾರಿಸಿ ಕೇಳುವಂತೆ, ಕಾಲಿನ ಕಿರುಬೆರಳಿಂದ ತಿಂಮನ ತಲೆ ಜುಟ್ಟಿನವರೆಗೂ ಬಾರಿಸಿ ಕೇಳಿದರು.

"ಅಪಸ್ಮೃತಿ ಇಲ್ಲತಾನೇ?" ಎಂದ ತಿಂಮ.

"ಅಪಾಯವೇನೂ ಇಲ್ಲ. ಅದಿರಲಿ, ನೀವು ಬೇಗೆಯೇ ಸರ್ಜನರ ಬಳಿ ಹೋಗಿ" ಎಂದು ಬೆನ್ನು ಚಪ್ಪರಿಸಿದರು.

"ಸರ್ಜನರ ಹತ್ತಿರ ಹೋದರೆ ಏನೂ ಅಪಾಯವಿಲ್ಲವಷ್ಟೆ?" ಎಂದು ಅಂಜಂಜುತ್ತ ಕೇಳಿದ.

"ಸರ್ಜನರಿಗೆ ಏನೂ ಅಪಾಯವಿಲ್ಲ" ಎಂದು ಎಲುಬಿಲ್ಲದ ನಾಲಿಗೆಯಿಂದ ನುಡಿದು ನಕ್ಕರು, ಎಲುಬಿಲ್ಲದ ಎಲುಬಿನ ಸೆಟ್ಟರು.

ಸರ್ಜನರಲ್ಲಿ ಮಾತ್ರ ಸಜ್ಜನರಿಲ್ಲವೇ? ಸರ್ಜನರು ಒಂದುವೇಳೆ ದುರ್ಜನರಿದ್ದರೆ ಇದ್ದೇ ಇವೆಯಲ್ಲ ಗೌ|ಕಾ|. ಬನ್ನಿ, ಕುಳಿತುಕೊಳ್ಳಿ, ಸಿಗರೇಟು ಸೇದಿ, ಈ ದಾಸನಿಂದ ಏನು ಸೇವೆಯಾಗಬೇಕು ಎಂಬುವ ರೀತಿಯಲ್ಲಿ ಸ್ವಾಗತವಿತ್ತರು. ಚಾಚೂ ಬಿಡದೆ ಸಾಂಗೋಪಾಂಗವಾಗಿ ತನ್ನ ಚರಿತ್ರೆಯನ್ನು ಹೇಳಿದ ತಿಂಮ.

"ತೊಂದರೆ ಇಲ್ಲ. ಚಿಕ್ಕ ಶಸ್ತ್ರಕ್ರಿಯೆ ಆಗಬೇಕು" ಎಂದು ಮುಖ ನೋಡಿದರು.

"ಎಲ್ಲಿ?"

"ಇಲ್ಲಿಯೇ, ಆಸ್ಪತ್ರೆಯಲ್ಲಿ" ಎಂದರು.

"ಆಸ್ಪತ್ರೆಯಲ್ಲಿ ಸರಿ. ಏನು, ಕಣ್ಣಲ್ಲಿಯೋ, ಕಿವಿಯಲ್ಲಿಯೋ" ಎಂದು ಕೇಳಿದ.

"ಓಹೋ, ಹಾಗೋ ನೀವು ಕೇಳಿದ್ದು; ಮೂಗನ್ನು ಕೊಂಚ ಕೊಯ್ಯಬೇಕು"

"ಅದಕ್ಕೂ ಮೊದಲು ಕಣ್ಣನ್ನು ಕುಯಿದುಬಿಡಿ. ಮೂಗು ಹೋದ ಮೇಲೆ ಕನ್ನಡಿ ನೋಡಿಕೊಂಡರೆ ಹುಚ್ಚೇ ಹಿಡಿದೀತು"

ಅದೆಂತಹ ಸ್ಫೂರ್ತಿ ಬಂದಿತೋ ಅವರಿಗೆ; ಕೂಡಲೆ ಫೋನಿನ ತೂಬಿನಲ್ಲಿ ಬೆರಳಿಟ್ಟು ತಿರಿವಿ ಎರಡೆರಡು ಬಾರಿ 'ಅಲ್ಲೋ' ಮಾಡಿ ಒಳಗೆ

ಹೋದವರು ಹೊರಗೇ ಬರಲಿಲ್ಲ. ಐದು ನಿಮಿಷದಲ್ಲಿಯೇ ಬಾಗಿಲಬಳಿ ಮೋಟಾರು ನಿಂತಿತು. ಸೋದರಮಾವನಷ್ಟು ಸಲಿಗೆಯಿಂದ ಬುಜದ ಮೇಲೆ ಕೈಯಿಕ್ಕಿ, "ಬನ್ನಿ, ಡಾಕ್ಟರು ಅಲ್ಲಿದ್ದಾರೆ. ನಮ್ಮ ವ್ಯಾನಿನಲ್ಲಿ ಹೋಗೋಣ ಬನ್ನಿ" ಎಂದು ಆದರದಿಂದ ಆಹ್ವಾನಿಸಿದರು. ಆ ವ್ಯಾನು ಎಲ್ಲಿಯದು ಎಂಬುದು ಆ ಮೇಲೆ ತಿಳಿಯಿತು, ಅದು ಹುಚ್ಚಾಸ್ಪತ್ರೆಯಲ್ಲಿ ಬಂದು ನಿಂತಮೇಲೆ.

"ನನಗೇನು ಹುಚ್ಚು ಹಿಡಿದಿದೆಯೇ? ಇಲ್ಲಿಗೇಕೆ ನನ್ನನ್ನು ತಂದದ್ದು" ಎಂದು ಬದಿಗಿದ್ದವರ ಮೇಲೆ ತಿಂಮ ಕಣ್ಣು ಕೆಂಪು ಮಾಡಿದ. ಆತನಿಗೂ ಅನುಮಾನವೆನಿಸಹತ್ತಿತು; ಇಲ್ಲದಿದ್ದರೆ ಇಲ್ಲಿಗೇಕೆ ಕರೆತಂದರೆಂದು.

ದೊಡ್ಡ ಡಾಕ್ಟರೊಬ್ಬರ ಕೋಣೆಯಲ್ಲಿ ಹೊಕ್ಕ. 'ಹುಚ್ಚ ಡಾಕ್ಟರು' ಎಂಬ ಹಲಿಗೆ ಅವರ ತಲೆ ಮೇಲೆ ನೇತಾಡುತ್ತಿದ್ದಿತು.

"ನಿಮಗೆ ಏನಾಗಿದೆ?" ಎಂದು ಅವರು ಅಂತಃಕರುಣದಿಂದ ಕೇಳಿದಾಗ ಅವನ ಕೋಪವು ಅಳತೆ ಮೀರಿತು.

"ರೋಗವನ್ನು ನಾನೇ ಹೇಳಿದರೆ, ನೀವು ಆ ಮೇಲೆ ಕಂಡುಹಿಡಿಯುತ್ತೀರಾ?" ಎಂದ. ಆಗ ಅವರಿಗೆ ಮನದಟ್ಟಾಯಿತು, ಇವನು ನಿಜವಾಗಿಯೂ ಅವರ ರೋಗಿ ಎಂಬುದು.

"ರೋಗಿ ಏನೂ ಹೇಳದೆ ವೈದ್ಯರು ಔಷಧಿ ಕೊಡುವದು ದನದ ಆಸ್ಪತ್ರೆಯಲ್ಲಿ" ಎಂದು ನಕ್ಕರು.

ಬಂದ ಕೆಲಸವಾಗಲಿ ಎಂದು ತಕಾರರು ಮಾಡದೆ "ಸಿನೇಮಾ ನೋಡುವಾಗ ಕಣ್ಣಲ್ಲಿ ನೀರು ಬರುತ್ತದ" ಎಂದು ಹೇಳಿದ. ಆ ಮೇಲೆ ಸುರುವಾಯಿತು ಪ್ರಶ್ನೆಯ ಹಾವಳಿ.

"ನೀರು ಬರುವದು ಯಾವ ಕಣ್ಣಲ್ಲಿ? ಕಣ್ಣಿನ ಯಾವ ಭಾಗದಲ್ಲಿ? ಮೇಲೆಯೋ–ಕೆಳಗೋ? ಎಡಬದಿಗೋ–ಬಲಬದಿಗೋ? ಎಷ್ಟು ನೀರು

ಬರುತ್ತೆ? ಅದರ ಬಣ್ಣ ಆಕಾರ, ರುಚಿ? ಆ ನೀರುಬಿಸಿ ಇದೆಯೋ? ಬಿಸಿ ಇದ್ದರೆ ಎಷ್ಟು ಬಿಸಿ? ನಿನಗೆ ಮದುವೆ ಆಗಿದೆಯೋ? ನಿಮ್ಮೂರಲ್ಲಿ ಕೆರೆ ಇಲ್ಲವೋ? ನೀವು ಮೊದಲಿನಿಂದಲೂ ಬೂಟು ಮೆಟ್ಟುತೀರಾ? ಅವು ಕೆಂಪೋ ಅಥವಾ ಕಪ್ಪೋ? ನೀವು ಶಾಲೆಯಲ್ಲಿದ್ದಾಗ ನಿಮ್ಮ ಮೇಷ್ಟ್ರು 'ನಿನಗೆ ಕಣ್ಣಿಲ್ಲವೇ?' ಎಂದು ಎಂದಾದರೂ ಬೈದದ್ದುಂಟೆ? ನಿಮಗೆ ಉಗುರು ಕಡಿಯುವ ಅಭ್ಯಾಸವಿದೆಯೇ? ಯಾರ ಉಗುರನ್ನು? ಸಕ್ಕರೆ ಬರಬಿದ್ದಾಗ ಕಾಫಿಗೆ ಉಪ್ಪು ಸೇರಿಸಿ ಕುಡಿಯುವಿರಾ? ಎಂದಿನಿಂದ ನಿಮ್ಮ ಹೆಂಡತಿ ನಿಮ್ಮನ್ನು ಹೊಡೆಯುವುದನ್ನು ಬಿಟ್ಟರು? ಏಕೆ? ರಸ್ತೆಯಲ್ಲಿ ಯಾರದಾದರೂ ಕರವಸ್ತ್ರ ಬಿದ್ದಿದ್ದರೆ ಅದನ್ನು ತೆಗೆದುಕೊಂಡು ಕಣ್ಣಿಗೊತ್ತಿಕೊಳ್ಳುವ ಸಂಪ್ರದಾಯವಿದೆಯೇ ನಿಮಗೆ? ಇತ್ಯಾದಿ, ಇತ್ಯಾದಿ...."

ಸಾಧ್ಯವಾದಷ್ಟು ಉತ್ತರ ಹೇಳಿದ.

"ಯಾರನ್ನು ಕಂಡರೆ ಕತ್ತು ಹಿಸುಗಬೇಕೆನಿಸುತ್ತದೆ ನಿಮಗೆ" ಎಂದರು. ಎಂದೂ ಇಲ್ಲದ ಆವೇಶ ಬಂದಿತು. 'ನಿಮ್ಮನ್ನೇ' ಎಂದವನೆ, ಮೇಲೆ ಹಾರಿ ಅವರ ಟೈಯಿಂದಲೆ ಅವರಿಗೆ ಉರಲು ಹಾಕುವಾಗ ಕೂಗಿಕೊಂಡರು. ಗೌಜಾಯಿತು. ಅವರಿವರು ಸೇರಿ ದೊಡ್ಡ ಡಾಕ್ಟರನ್ನು 'ಹುಚ್ಚ'ನ ಕೈಯಿಂದ ಪಾರುಮಾಡಿದರು.

"....ಇದು ಹುಚ್ಚರ ಆಸ್ಪತ್ರೆಯಲ್ಲ. ಹುಚ್ಚ ಡಾಕ್ಟರ ಆಸ್ಪತ್ರೆ" ಎಂದು ಹೇಳಿ ತಿಂಮ ಮನೆಗೆ ಬಂದ.

ಸಿನೇಮಾ ನೋಡುವಾಗ ಕಣ್ಣಲ್ಲಿ ನೀರು ಸೋರುತ್ತಲ್ಲ, ಏನು ಮಾಡಬೇಕೆಂಬ ಯೋಚನೆಯೇನೋ ಹಾಗೆಯೇ ಉಳಿಯಿತು ಅವನಿಗೆ. ಕಡೆಗೊಂದು ಸಿನೇಮಾ ನೋಡಿದ. ಅಂದೇ ಬೇನೆ ಗುಣವಾಯಿತು. ಆ ಮೇಲೆ ನೋಡಿದ್ದರೆ ತಾನೇ ಕಣ್ಣಲ್ಲಿ ನೀರು ಬರಬೇಕು? ಅವನ ರೋಗವನ್ನು ಕಳೆದದು ತಮಿಳು ಚಿತ್ರ–ಉದ್ದ ಇಪ್ಪತ್ತೈದು ಸಾವಿರ ಅಡಿ;

ಅಗಲ ನಾಲ್ಕೂವರೆ ತಾಸು (ಸ್ಲೈಡು, ಇಂಟರವಲ್ ಬಿಟ್ಟು); ಹಾಡುಗಳು ಮೂವತ್ತೇಳು; ಅಲಾಪನಗಳು ಎಪ್ಪತ್ತೇಳು; ಮುಖ್ಯ ನಾಯಕಿ ನಶ್ಯ ಹಾಕುತ್ತಾಳೆ.

ತಿಂಮನ ಈ ಔಷಧಿ ಡಾಕ್ಟರಗೇನು ಗೊತ್ತು, ಪಾಪ!



## ತಿಂಮನ ಬ್ರಹ್ಮಚರ್ಯ

"ರಾವ್‌ಸಾಹೇಬರೇನು ಬಲ್ಲರು ರಾಷ್ಟ್ರಸಭೆ ಪಟ್ಟ ಕಷ್ಟ?" ಎಂದಂತೆ, "ಮದುವೆಯಾದವರೇನು ಬಲ್ಲರು ಬ್ರಹ್ಮಚಾರಿಯ ಭವಣೆ ?" ಬರೀ ಅವಿವಾಹಿತನಷ್ಟೇ ಅಲ್ಲ, ಹದಿನಾರಾಣೆ ಹಸೀ ಬ್ರಹ್ಮಚಾರಿಯಾದ ತಿಂಮ. ಬ್ರಹ್ಮಚರ್ಯೆ ಎಂದರೇನು ಎಂಬುದು ತಿಳಿಯಬೇಕಾದರೆ ಒಮ್ಮೆ ತಿಂಮನನ್ನು ನೋಡಬೇಕು. ಕಾಂತಿಯುಕ್ತವಾದ ಆ ಕಣ್ಣಾಲಿಯ ತೇಜಸ್ಸೇ ಸಾಕು, ಅವನ ವಟುತ್ವಕ್ಕೆ ಪರೆ ಹಚ್ಚಿ ತೋರಿಸಲು! ಸ್ತ್ರೀ ಸಂಪರ್ಕವಿಲ್ಲ ಮಾತ್ರವಲ್ಲ, ಸ್ತ್ರೀ ಪಾಕವಿಲ್ಲ, ಸ್ತ್ರೀ ದರ್ಶನವಿಲ್ಲ, ಸ್ತ್ರೀ ಯಿದ್ದ ಊರಲ್ಲಿ ತಿಂಮನಿಲ್ಲ, ಸ್ತ್ರೀ ನೀರುಕುಡಿವ ನಲ್ಲಿಯು ಸಹ ತಿಂಮ ನಿಗೆ ಗೌಣ. ಸ್ತ್ರೀ ನೋಡುವ ಮುಗಿಲು, ಮೂಸುವ ಗಾಳಿ, ಕಾಣುವ ಸೂರ್ಯ, ತಾಗುವ ಭೂಮಿ ಎಲ್ಲವೂ ತಿಂಮನಿಗೆ ಬಹು ದೂರವಾದುವು. ನಿಷ್ಠೆಯಿಂದ ಬಾಳಬೇಕು ನಾಲ್ಕುಕಾಲ; ಅವರಿವರಿಂದ ಬೆರಳುಮಾಡಿಸಿ ಗೊಂಡು ಕರೆಸಿಕೊಳ್ಳದೆ ತಿರುಗುವ ಗುರುವಾಗಿ ಮೆರೆಯುವದಕ್ಕಿಂತಲೂ ಮೂಲೆಯಲ್ಲುಳಿದು ಮೂಕ ಬ್ರಹ್ಮಚಾರಿಯಾಗಿ ಬಾಳುವದು ಒಳಿತಲ್ಲವೇ ಎಂದ. ಸ್ತ್ರೀ ರಹಿತವಾದ ಕಠೋರ ಜೀವನವೇ ತಿಂಮನ ತಪಸ್ಸು. ಕಷ್ಟದಿಂದ ಕಾಯ್ದುಕೊಂಡ ಗಳಿಸಿದ ತಪೋಬಲವನ್ನು; ತಪಸ್ಸಿದ್ಧಿ ಯಾಯಿತು, ಆಗದೆ ಏನು ?

ತಿಂಮನ ಘೋರ ತಪಸ್ಸಿಗೆ ದೇವರ ಅಪ್ಪನೂ ಮೆಚ್ಚಿದ, ಗಡಗಡ ನಡುಗುತ್ತ ವೈಕುಂಠದಿಂದ ವಿಷ್ಣುವು ಓಡಿಯೇ ಬಂದ–ಬ್ರಹ್ಮಚಾರಿ ತಿಂಮನಿಗೆ ಅವನಲ್ಲದೆ ಇನ್ನಾರು ಅಂಜಬೇಕು ? ತಿಂಮನ ಮುಂದೆ ಕೃಷ್ಣನಿಗೆ ಕೀಳರಿಮೆ ಬಂದರೆ ಏನಾಶ್ಚರ್ಯ ! ದ್ವಿಪತ್ನೀ ಪ್ರತಿಬಂಧಕ ಕಾನೂನು ಬರೀ ಮಾನವರಿಗೆ (ಅದೂ ಸಹ ಮುಸ್ಲಿಮೇತರರಿಗೆ ಮಾತ್ರ) ಎಂದು ತಿಳಿದ ಶಿವನು, ತಲೆಗೊಂದು ಬದಿಗೊಂದು ಹೆಂಡಂದಿರೊಡನೆ ಕೂಡಲೆ ಬಂದ. ಚಿಕ್ಕಪುಟ್ಟ ದೇವತೆಗಳಂತೂ ದೊಡ್ಡಾಟದ ಸೇವಕನ ಪಾರ್ಟು ಮಾಡುವವರಂತೆ ಸಾಲಾಗಿ ಬಂದರು. ದೇವರುಗಳ ಸರ್ಕಸ್ಸೇ ಬಂದಿಳಿಯಿತು ಭೂಲೋಕಕ್ಕೆ.

"ಎಲೈ ಬ್ರಹ್ಮಚಾರಿ ತಿಂಮನೇ! ನಿನ್ನ ಈ ಘೋರವಾದ ತಪಸ್ಸಿಗೆ ಮೆಚ್ಚಿದೆವು. ಮಗೂ, ಕಣ್ಣುತೆರೆ. ನಿನಗೇನು ಬೇಕು ?" ಎಂದೊಂದು ವಾಣಿ ಕೇಳಿತು ತಿಂಮನ ಕಿವಿಯಲ್ಲಿ. ಭೂಲೋಕದ ನೆನಪಾಗಿ ಬ್ರಹ್ಮಚಾರಿ ತಿಂಮ ಛಟ್ಟನೆ ಕಣ್ಣು ತೆರೆದ. ಅಲಂಕೃತವಾದ ವಿಮಾನವು ಸ್ವಾಗತಿಸಿತು. ಬರೀ ಗಂಡು ದೇವತೆಗಳೇ ಸುತ್ತುಗಟ್ಟಿದ್ದರು—ಹೆಣ್ಣು ದೇವತೆಗಳಿಗೆ ಹತ್ತಿರ ಬರಲು ಸಹ ಸಾಧ್ಯವಿಲ್ಲ! ಒಣ ವೈಯ, ಗಡ್ಡ ಬಿಟ್ಟ ತಿಂಮನು ವಿಮಾನಾರೂಢನಾದ. ಹೂವಿನ ಮಳೆಗರೆಯಿತು. ಕೂಡಲೆ ತಿಂಮ ಮೂಗು ಮುಚ್ಚಿಕೊಂಡ, ಸುವಾಸನೆಯನ್ನು ಸಹಿಸಲಾರದೆ. ಪೀತಾಂಬರಗಳು ಪರಿಮಳ ದ್ರವ್ಯಗಳು ತಿಂಮನ ಬದಿ ಬಂದವು. 'ನಾನು ಬ್ರಹ್ಮಚಾರಿ' ಎಂದವನೇ ಅದೆಲ್ಲವನ್ನೂ ಕಾಲಿನಿಂದ ಒದೆದು ಕುಳಿತ. ಭಕ್ಷ್ಯ-ಭೋಜ್ಯಗಳು ಬಾಯಿಗೆ ಬಂದವು. 'ಛೇ! ಇವೆಲ್ಲವೂ ವಿಲಾಸಿಗಳಿಗೆ' ಎಂದವನೇ ಬೀಸಿ ಎಸೆದ. ತಪೋಬಲಕ್ಕೆ ಇದಿರುಂಟೆ ? ತನ ಏಕಮೇವ ಕೌಪೀನದೊಂದಿಗೆ ಶುಷ್ಕದೇಹದ ತಿಂಮ ವಿಮಾನಾರೂಢನಾಗಿ ಸ್ವರ್ಗಕ್ಕೆ ಹಾರಿದ.

ಒಳಬಾಗಿಲಲ್ಲಿ ಕಾಲಿಡುವದೊಂದೇ ತಡ "ಬ್ರಹ್ಮಚಾರಿ ತಿಂಮಕು ಜೈ !" ಎಂದು ಸಹಸ್ರಾರು ದೇವತೆಗಳು ಸ್ವಾಗತಿಸಿದರು. "ಮುಚ್ಚಿರಿ

ಬಾಯಿ, ಮೂರ್ಖಶಿರೋಮಣಿಗಳೇ!" ಎಂದವನೇ ಕಣ್ಣಿಂದ ಕಿಡಿ ಹಾರಿಸಿದ—ಕೇಳುವುದೇನು, ಅಸ್ಖಲಿತ ಬ್ರಹ್ಮಚಾರಿ!

"ಎಲ್ಲಿ ಎಲ್ಲಿ, ನನ್ನ ಬ್ರಹ್ಮಚರ್ಯೆಗೆ ತಕ್ಕ ಪ್ರತಿಫಲ? ಎಲ್ಲಿದ್ದಾರೆ, ಕರೆಯಿರಿ ಕರೆಯಿರಿ, ತಕ್ಷಣ ಹಿಡಿದು ತನ್ನಿರಿ" ತಿಂಮ ಚೀತ್ಕಾರ ಮಾಡಿದ. ಸ್ವರ್ಗವೆಲ್ಲವೂ ಬ್ರಹ್ಮಚಾರಿಯ ಗುಡುಗಿಗೆ ನಡುಗಿತು.

"ಯಾರನ್ನು ಪ್ರಭೂ, ಯಾರನ್ನು ಕರೆಯಬೇಕು?" ಇಂದ್ರಾದಿಗಳು ಭಯದಿಂದ ಕೇಳಿದರು-

ತಿಂಮನ ಸಹನಶಕ್ತಿಯು ಅಳತೆ ಮೀರಿತು. "ಯಾರನ್ನು? ಇನ್ನಾರನ್ನು? ಬ್ರಹ್ಮಚಾರಿಗೆ ಯಾರು ಬೇಕೆಂಬುದೂ ತಿಳಿಯದೇ, ಮೂರ್ಖರೇ? ಎಲ್ಲಿದ್ದಾಳವಳು, ಎಳೆದು ತನ್ನಿರಿ. ಎಲ್ಲರೂ ಬರಲಿ. ರಂಭೆ, ಊರ್ವಶಿ, ಮೇನಕೆ ನಿಮ್ಮ ಸ್ವರ್ಗದ ಎಲ್ಲ 'ಸ್ಟಾರು' ಗಳೂ ತಕ್ಷಣ ಬರಬೇಕು. ಹೂಂ!"

ಇದ್ದಕ್ಕಿದ್ದಂತೆ ಎತ್ತಲಿಂದಲೋ ಘೊಳ್ಳೆಂದು ನಕ್ಕದನಿ ಕೇಳಿತು. ಕಣ್ಣು ಕೆಂಪುಮಾಡಿ ತಿಂಮ ಗರ್‍ರನೆ ತಿರುಗಿ ನೋಡಿದ. ಗಹಗಹಿಸಿ ನಗಹತ್ತಿತು ಬಿಳೀ ಟೊಪ್ಪಿಗೆ!

"ತಿಳಿಯಿತು ಬಿಡೋ ತಿಂಮಾ, ನೀನೂ ನನ್ನ ಹಾದಿಗೇ ಬಂದಿ" ಎಂದಿತು ಅದು.

"ಏನು ನಿನ್ನ ತಲೆ ಹಾಗೆಂದರೆ? ನಿನ್ನ ಮಾತಿನ ಮರ್ಮವೇನು?"

"ಮರ್ಮವೇನಿದೆಯೋ ತಿಂಮಾ ಇದರಲ್ಲಿ? ತ್ಯಾಗ ಸೇವೆಗಳಲ್ಲಿ ಇಡೀ ಜೀವನವನ್ನು ಸವೆಸಿ ಅಧಿಕಾರಕ್ಕಾಗಿ ನಾನು ಬಂದೆ—ಬ್ರಹ್ಮಚಾರಿಯಾಗಿ ತಪಸ್ಸು ಬೆಳೆಸಿ, ಸ್ವರ್ಗದ ಸ್ಟಾರ್‌ಗಾಗಿ ನೀನು ಬಂದಿ"

ತಿಂಮ ಮರಳಿ ಮನೆಗೆ ಬಂದು, ಮದುವೆಯಾಗಿ ಮರ್ಯಾದಸ್ತನಾದ. ಟೊಪ್ಪಿಗೆ ಮಾತ್ರ ಇನ್ನೂ............"

# ಯಾರಿಗೆ ಅವಮಾನ ?




“ಕತ್ತೆ” ಎಂದು ತಿಂಮನನ್ನು ಬೈದರು ಅವನ ತಂದೆ.

“ಅಯ್ಯೋ, ಇದೇನು ಅವಮಾನ ! ಇವನಿಗೆ ಹೋಲಿಸುತ್ತೀರಾ ನನ್ನನ್ನು ?” ಎಂದು ಕಂಣೀರಿಟ್ಟಿತು.

# ಹೆಸರಿನಲ್ಲೇನಿಲ್ಲ ?

ಜಗತ್ತಿನೊಳಗೂ ಮತ್ತೂ ಹೊರಗೂ ಇರುವ ಮತ್ತು ಇಲ್ಲದಿರುವ ಪ್ರತಿಯೊಂದಕ್ಕೂ ಒಂದೊಂದು ಹೆಸರನ್ನು ಹುಡುಕಿ ಇಟ್ಟುದುದಕ್ಕೆ ಇವೆಲ್ಲವನ್ನೂ ಸೃಷ್ಟಿಸಿದವನೂ ಋಣಿಯೇ. ಸದ್ಯ ಸೃಷ್ಟಿಕರ್ತನಿಗೂ ಹೆಸರನ್ನು ಸೃಷ್ಟಿಸಿದವನೊಬ್ಬ ಇರಲೇಬೇಕಲ್ಲ ? ಹೆಸರಿನ ಸ್ವಾರಸ್ಯವೆಂದರೆ ಹೆಸರಿಗೆ ಹೆಸರು ಎಂದು ಹೆಸರಿಟ್ಟ ಹೆಸರುವಾಸಿಯ ಹೆಸರೇ ಹೆಸರಿಲ್ಲದಾಗಿದೆ. ಸೃಷ್ಟಿ ಏನು, ಯಾರೂ ಮಾಡಬಹುದು. ಆದರೆ ಹೆಸರಿಡುವುದು ಮಾತ್ರ ಬಹು ದೊಡ್ಡ ಕೆಲಸ. ಮೂರುನೂರು ಪುಟಗಳ ಪುಸ್ತಕವೊಂದನ್ನು ಮೂರೇ ರಾತ್ರಿಗಳಲ್ಲಿ ಬರೆದು ಮುಗಿಸಿದ ಸ್ಫೂರ್ತಿಯ ಮೂರ್ತಿಯೊಬ್ಬರು ಆ ಗ್ರಂಥಕ್ಕೆ ಹೆಸರು ಹುಡುಕಲು ಮೂರು ತಿಂಗಳು ತಿಣಿಕಿ ಕಡೆಗೆ " ಮೂರುನೂರು ಪುಟಗಳು " ಎಂದೇ ಹೆಸರಿಕ್ಕಿದರಂತೆ, ರೇಲ್ವೆ ಗೈಡಿನಂತಹ ತಮ್ಮ ಹಿರಿ ಹೊತ್ತಿಗೆಗೆ. ಅದರಲ್ಲೇನು ತಪ್ಪು ? " ಇಪ್ಪತ್ತೈದು ಕತೆಗಳು " " ನೂರಿಪ್ಪತ್ತು ಕವನಗಳು " " ಮೂರು ನೂರು ಚಿತ್ರಗಳು " ಎಂದು ಹೆಸರಿಟ್ಟಿಲ್ಲವೆ ಹಲವು ಹಿರಿ ಸಾಹಿತಿಗಳು ತಮ್ಮ ಕಿರಿ ಪುಸ್ತಕಗಳಿಗೆ ?

ಹೆಂಡತಿಯನ್ನು—ತಮ್ಮ ಹೆಂಡತಿಯನ್ನೇ—ಹೆಸರಿಸಿಂದ ಕರೆಯ ಕೂಡದೆಂಬ ಮಡಿವಂತಿಕೆ ಅನೇಕ ಶೀಲವಂತರಿಗೆ. ಅಂತಹರನ್ನು ಪುರಾಣಕಾಲದವರೆಂದು ಟೀಕಿಸುವ ಕಾನ್ಸ್ಟಿಟ್ಯೂಶನ ಕಾಲದಲ್ಲಿಯೂ ನಮ್ಮ ಗೆಳೆಯರೊಬ್ಬರಿಗೆ ಇದೇ ರೋಗವಿದ್ದಿತು. ಗಂಟೆಗಟ್ಟಲೆ ಮನೆಯ ಮುಂದೆ ನಿಂತು "ಏ....ಏ....ಏ....ಬಾಗಿಲ........ಬಾಗಿಲ........" ಎಂದು ಚೀರುವಾಗೊಮ್ಮೆ ಅವರನ್ನೇ ಕೇಳಿದೆ, ಏಕೆ ಹೆಂಡತಿಯನ್ನು ಹೆಸರಿಸಿಂದ ಕರೆಯಕೂಡದೆಂದು. ಆಮೇಲೆ ತಿಳಿಯಿತು ತಪ್ಪು ಅವರದಲ್ಲ ವೆಂಬುದು. ಅವರ ಮನೆಯವರ ಹೆಸರು 'ಅಕ್ಕಮ್ಮ'! ಹೆಸರಿನಲ್ಲೇನಿದೆ ಎಂದರೆ ಆಯಿತೇ ? ಮಾತು ಬಾರದಿದ್ದರೂ ಅಳಲುಮಾತ್ರ ಅಭ್ಯಸಿಸಿದ ಮೂರು ತಿಂಗಳ ಕೂಸಿನ ಹೆಸರನ್ನು ಕೂಗಿ, ಕೂಸಿನ ತಾಯಿಯನ್ನು ಎಬ್ಬಿಸುವ ಜಾಣತನವೂ ಇದೆ ಜಗತ್ತಿನಲ್ಲಿ. ಹೆತ್ತ ಮಕ್ಕಳಿಗೆ ಹೆಸರಿಡುವ ಹೊಣೆ ಯೇನು ಅಂತಿಂತಹದಲ್ಲ. ಪ್ರಹ್ಲಾದ ಎಂದು ಹೆಸರಿಡುವಾಗ ತಂದೆಗೂ, ಘಟೋತ್ಕಜನೆಂದು ಹೆಸರಿಡುವಾಗ ತಾಯಿಗೂ, ಚಂದ್ರಹಾಸನೆಂದೇ ಹೆಸರಿಡುವಾಗ ಇಬ್ಬರಿಗೂ, ಕೃಷ್ಣನೆಂದು ಹೆಸರಿಡುವಾಗ ಸೋದರ ಮಾವನಿಗೂ ಕೊಂಚ ಕಷ್ಟವೆನಿಸಿದರೆ ಏನೂ ಸೋಜಿಗವಿಲ್ಲ. ಗೋಡ್ಸೆಯ ಹೆಸರನ್ನು ಹರಿಜನರು ಮಕ್ಕಳಿಗೆ ಇಡುವಂತೆಯೇ ಇಲ್ಲವಲ್ಲ ? ಕಾಸಿಂ ರಜವಿಯೆಂದು ಹೆಸರಿಟ್ಟವರೆಲ್ಲರೂ ಹೆಸರನ್ನು ಬದಲಾಯಿಸಿಕೊಳ್ಳಲೂ ಬಹುದು. ಅಷ್ಟೇಕೆ ಹಿಂದೊಮ್ಮೆ ಹಿಟ್ಲರನೆಂದು ಹೆಸರಿಡಲ್ಪಟ್ಟ ಮಗು ವಿಗೆ ಆಶೀರ್ವಾದ ಅನುಗ್ರಹಿಸಲು ಆಗದು ಎನ್ನಲಿಲ್ಲವೆ ಇಂಗ್ಲೆಂಡಿನಲ್ಲಿ ಚರ್ಚಿನ ಪುರೋಹಿತನೊಬ್ಬ ? ಹೆಸರಿನಲ್ಲೇನಿಲ್ಲ ?

ನಾವು ನಿತ್ಯವೂ ಕಾಣುವ ಹಲವು ವ್ಯಕ್ತಿಗಳ ವ್ಯಕ್ತಿತ್ವಕ್ಕೂ ಅವರ ಹೆಸರಿಗೂ ಇರುವ-ಅಂದರೆ ಇರದಿರುವ-ಸಂಬಂಧವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಆ ಅವರೇ ನಕ್ಕಾರು, ನಗಲು ಅವರಿಗೆ ಬರುತ್ತಿದ್ದರೆ. ಗಂಡನಿಗೆ ಬೇರೆ ಊರಿಗೆ ವರ್ಗವಾದಾಗ ಹಿಂಬಾಲಿಸಲು ತಕರಾರು ಹೂಡಿದ ಶ್ರೀಮತಿ ಸೀತಮ್ಮ, ಅನ್ನದಲ್ಲಿ ವಿಷ ಬೆರಿಸಿ ಕೈಹಿಡಿದ ಗಂಡ

## ಹುಚ್ಚು—ಹುರುಳು

ನನ್ನ ಯಮರಾಯನ ಕೈಗೆ ಹಿಡಿದುಕೊಟ್ಟ ಮಹಾಸತಿ ಸಾವಿತ್ರಮ್ಮ, ಊರಿಗೊಂದು ಹೆಂಡನ್ನಿಟ್ಟ ಡ್ರಾಯವ್ವರ ರಾಮು, ದಾಯಾದಿಯ ಮಗನನ್ನು ದತ್ತು ಕೇಳುವ ಸಂತಾನಂ ಅಯ್ಯಂಗಾರರೂ, ಹೆಂಣಿನ ಜಾತಿಯನ್ನೇ ದ್ವೇಷಿಸಿ ಬ್ರಹ್ಮಚಾರಿಯಾಗಿಯೇ ಸತ್ತು ಸ್ವರ್ಗಕ್ಕೇರಿದ ಕುಟುಂಬಯ್ಯನವರೂ, ಕರ್ಕೋಟಕನ ಅನುಗ್ರಹ ಹೊಂದಿದ ನಳನ ರೂಪವನ್ನೂ ಧಿಕ್ಕರಿಸುವಂತಹ ರೂಪವುಳ್ಳ ಸುಂದರರಾಜನ್ನರೂ ಹೇರಳ ವಾಗಿದ್ದಾರೆ. ಬಸ್‌ಸ್ಟ್ಯಾಂಡಿನಲ್ಲಿ ಕಾಡುತ್ತಿದ್ದ ಭಿಕ್ಷುಕಳನ್ನು ಹೆಸರು ಕೇಳಿದರೆ, ಲಕ್ಷ್ಮಿ ಎಂದು ಹೇಳಿ ತಾನೇ ನಕ್ಕಾಳು.

ಊರಿನ ಹೆಸರುಗಳಲ್ಲೇನು ಸ್ವಾರಸ್ಯವಿಲ್ಲದಿಲ್ಲ. ಟೋರ್ನಮೆಂಟಿ ನಲ್ಲಿ ಮೊದಲಿನ ಅರ್ಧಗಂಟೆಯಲ್ಲಿಯೇ ಸಾಲಾಗಿ ಆರು ಗೋಲು ಹೊಡಿಸಿ ಕೊಂಡು ಹಿಂತಿರುಗುತ್ತಿದ್ದವರನ್ನು ಯಾವ ಊರು ನಿಮ್ಮದು ಎಂದು ಕೇಳಿದರೆ 'ವಿಜಯಪುರ'ದವರೆಂದು ಹೇಳಬೇಕೆ? (ಕನ್ನಡ ವೀರರಿಗೆ ಕೋಪ ಬರುವದಾದರೆ 'ಪುರ'ವನ್ನು 'ವಾಡ' ಎಂದು ತಿದ್ದಿಕೊಳ್ಳಬೇ ಕೆಂದು ಸೂಚನೆ). ಸೈಯದ್ ಕಾಸಿಂ ರಜವಿಯ ಅಸುರ ಸೇನೆಯಿಂದ ತುಂಬಿದ್ದಿತು ಸುರಪುರ. "ನಮ್ಮೂರಲ್ಲಿ ಹೊಳೆಯಿದೆ–ಆದರೆ ಕುಡಿಯಲು ನೀರಿಲ್ಲ" ಎಂದು ಕೂಗಿ ಕೂಗಿ ಬಾಯಾರಿಕೆ ಹೆಚ್ಚು ಮಾಡಿಕೊಳ್ಳಲಿಲ್ಲವೆ ಮಂತ್ರಿಗಳು ಬಂದಾಗ ಹರಿಹರದ ಪುರಜನರು? ಇದು ಸಾಗರದಲ್ಲಿಯೇ ಆಗಿದ್ದರೆ? ಸಹಾರ ಮರುಭೂಮಿಯನ್ನು ಮರೆಸುವ ಸೌಂದರ್ಯವುಳ್ಳ ಹೂವಿನ ಹಡಗಲಿ ಇಲ್ಲವೆ ಬಳ್ಳಾರಿ ಜಿಲ್ಲೆಯಲ್ಲಿ? ಗಜೇಂದ್ರಗಡದಲ್ಲಿ ಆಡುಗಳೂ ಇಲ್ಲವಂತೆ ನಿಜವೇ?

ಗಾಂಧೀಜಿಯವರನ್ನು ಜನ್ಮಶತ್ರುವೆಂದು ಭಾವಿಸಿದ ಅನೇಕರಿಗೆ ಇಂದು ಗಾಂಧಿ ಎಂಬ ಹೆಸರೇ ಬ್ಯಾಂಕು ಆಗಿಲ್ಲವೇ? ಜನವರಿ ಮೂವ ತ್ತರ ನಂತರ ಬದಲಾಗಿರುವ ಹೆಸರುಗಳು ಒಂದೇ, ಎರಡೇ! ದಶರಥ 'ರಾಮಾ ರಾಮಾ' ಎಂದಂತೆ ಗಾಂಧೀಜಿಯವರು 'ಖಾದಿ-ಖಾದಿ' ಎಂದು

ಕಂಡು ಮುಚ್ಚಿದರೂ "ಮಹಾತ್ಮ ಮಿಲ್ಸು"ಗಳೂ, ಅಹಿಂಸೆಗಾಗಿಯೇ ಬಾಪುಜಿಯವರು ಹಿಂಸೆ ತಾಳಿದರೂ "ಬಾಪೂಜಿ ಅಮ್ಯೂನಿಶನ್ ಶಾಪು"ಗಳೂ ಇದ್ದಕ್ಕಿದ್ದಂತೆ ಜನ್ಮವೆತ್ತಿದವು. "ಕಸ್ತೂರಬಾ ಕಾಸ್ಮೆಟಿಕ್ಸ್" ಬಂದಿಲ್ಲದೇ ? ಇನ್ನು ನಾವು ಕಾಣಬೇಕಾದುದು "ಶಾಂತಿಮೂರ್ತಿ ರಜವಿ ಪೀಸ್ ಕಮಿಟಿ", ಅದರ ಕಚೇರಿಯು "ರಾಜಾಜಿ ವ್ಹಿಸ್ಕಿ ಫೌಂಟಿನ"ದ ಅಟ್ಟದಮೇಲೆ. ಈಗಾಗಲೇ ಬೇಕಾದಷ್ಟು—ಅಂದರೆ ಬೇಡಾದಷ್ಟು ಇವೆ ಓಣಿಗೆ ಹತ್ತು "ಮಹಾಲಕ್ಷ್ಮಿ ಹೇ–ಅ–ರ ಕಟಿಂಗ ಸಲೂನ"ಗಳು, "ಬ್ರಹ್ಮಚಾರಿ ಬ್ರ್ಯಾಂಡಿನ ಲವ್ಲಕ್ಕುಗಳು ಬೇಕಾದರೆ ನಮ್ಮ ಬ್ರಾಡ್ವೇ ಶಾಪಿಗೇ ಬನ್ನಿರಿ" ಎಂದೊಂದು ಜಾಹೀರಾತು. ಆ ಬ್ರಾಡ್ವೇಯಿಂದ ಇಬ್ಬರು ಹೊರಬಿದ್ದರೆ ಒಬ್ಬರು ಒಳದೂರಲು ಸಾಧ್ಯ; ಮೂರುವರಿ ಅಂಗುಳ ಅಗಲದ ಕೊಳಿವಿ ಆ ಬ್ರಾಡ್ವೇ ಎಂದರೆ.

ರುಚಿ ಹೇಗೇ ಇರಲಿ ಬರೀ ಬಂಣದಿಂದ ಅಂದಕಾಣುವ ಹಂಣಿಗೆ "ನಾರಂಗಿ" ಎನ್ನುವದಿಲ್ಲವೆ ?

ಪುಸ್ತಕದ ಅಂಗಡಿಯಲ್ಲಿ ಕುಳಿತು ತವುಡು ಕುಟ್ಟುತ್ತಿದ್ದಾಗ ಒಬ್ಬ ಗೆಳೆಯರನ್ನು ಕೇಳಿದೆ "ತಾರಾನಾಥರಾಯರ ಜಗಳವನ್ನು" ನೋಡಿದಿರಾ ಎಂದು. ಯಾರೊಡನೆ ಎಂದರು ಗಾಬರಿಯಾಗಿ. ಜಗಳವೆಂಬ ಪುಸ್ತಕವನ್ನು ತಾರನಾಥರಾಯರು ಬರೆದಿದ್ದಾರೆ ಎಂದು ಹೇಳಿದಮೇಲೆ ಆ ಗೆಳೆಯರಿಗೆ ರಕ್ತದ ಒತ್ತಡ ಕಡಿಮೆಯಾಯಿತು. ಆ ಮೇಲೆ ತಿಳಿಯಿತು ಅವರು ಪ್ರೇಮಪೀಠದವರೆಂದು. ಪ್ರೇಮಪೀಠದ ಜನಕರ ಜಗಳವೆ ?

ಹಲವು ಪುಸ್ತಕಗಳ ಮತ್ತು ಅವುಗಳ ಬರೆಹಗಾರರ ಹೆಸರುಗಳನ್ನು ಅನುಕೂಲವಾಗುವಂತೆ ಜೋಡಿಸಿದರೆ ಹಾಸ್ಯದ ಹಬ್ಬವೇ ಆದೀತು. ನಗಲು ಬಾರದವರಿಗೆ ಕೋಪ ಬರುವ ಸಂಭವವೂ ಇದ್ದೀತು. ಆದರೆ ರಸಿಕರಾದ ಕನ್ನಡ ಸಾಹಿತಿಗಳು ನಗಲಾರರೆಂದರೆ ಯಾರಿಗೂ ಕೋಪ ಬರಬಹುದು ಆಮೇಲೆ. ಬೇಂದ್ರೆಯವರ ನಿದ್ದೆ, ಬೇಂದ್ರೆ ದತ್ತರಾಯರ ಅನಂತ ಪ್ರಣಯವೆಂದು ನಾವು ನಸುನಕ್ಕರೆ ನಗುವಿನ ಊಟಿಯಾದ

ಕವಿವರರು ನಿದ್ದೆಯಲ್ಲಿಯೇ ನಕ್ಕಾರು. "ಶ್ರೀರಂಗರ ಪುರುಷಾರ್ಥದ ಬೆಲೆ ಎಷ್ಟು?" ಎಂದೊಬ್ಬ ಗಿರಾಕಿಯು ಕೇಳಿದಾಗ ಅಲ್ಲಿ ಕುಳಿತವರೆಲ್ಲರೂ ನಕ್ಕು ನಕ್ಕು ಬಿದ್ದೆವು.

"…………ನ ಹೆಂಡತಿ ಗಂಡನಾದರೆ", "ನಾನ್ಹೇಗೆ ವ್ಯಭಿಚಾರಿಯಾದೆ……..ರಿಂದ", "…. ……..ನ ಹೆಂಣಿನ ಹುಚ್ಚು", "…………ನ ಶ್ರಾದ್ಧ". "…………ನ ಎರಡನೆ ಸಂಬಂಧ", "…. ……..ನ ಹೆಣದ ಹಿಂದೆ", "…………ನ ಹೆಣ ಶೃಂಗಾರ", "…………ರವರ ಸೂಳೆ" ಮುಂತಾದವು ಗಮ್ಮತ್ತು ಎನಿಸಬಹುದು. ಗ್ರಂಥಕರ್ತರ ಹೆಸರು ಇರದ ಕಾರಣ ಚೇಷ್ಟೆ ಅರಕಳಿ ಎನಿಸಿ ನಗುವಿಗೆ ಕೊರತೆಯಾದರೆ ತಿಂಮನ ಹೆಸರನ್ನೇ ಸೇರಿಸಿ ಓದಿಬಿಡಿ.

ಗುರುರಾಜಾಚಾರ್ಯರ ವಿಲಕ್ಷಣ ಕೊಲೆ, ನರಸಿಂಹ ಸ್ವಾಮಿಯ ಕ್ಷೌರ ಹಂಬಲು, ವೀಸಿಯವರ ಹೂಕೊಳ್ಳಿ, ಚುಳಿಕಿ ಗೋವಿಂದರಾಯರ ಸ್ಮಶಾನ ವೈರಾಗ್ಯ, ಮಿರ್ಜಿ ಅಂಣಾರಾಯರ ನಿಸರ್ಗ, ಕಸ್ತೂರಿಯವರ ಡೊಂಕುಬಾಲ, ಬೇಂದ್ರೆ ಲಕ್ಷ್ಮಣರಾಯರ ಕಳ್ಳಸಂತೆ, ಕ. ಶಂಕರ ಭಟ್ಟರ ನಲ್ಮೆ, ಪ್ರೊ. ಜಹಗೀರದಾರರ ಕಾಮದಹನ, ಶ್ರೀ ಆಲೂರವರ ಗತವೈಭವ, ಪ್ರೊ. ಗೋಕಾಕರ ಏರಿಳಿತ, ಗುಂಡಪ್ಪನವರ ಉತ್ತರ ಕುಮಾರ, ಅ. ನ. ಕೃಷ್ಣರಾಯರನಗ್ನ ಸತ್ಯ, ಬನ್ನಂಜೆಯವರ ನಾನೇಕೆ ಹೀಗೆ, ರತಿದರ್ಶನ ಜೋಶಿಯವರಿಂದ, ಕನ್ಯಾಬಲಿ ಕಾರಂತರಿಂದ, ಮೇವುಂಡಿ ಮಲ್ಲಾರಿ ಮಂಗ ಅಂದರೆ ಮಂಗ, ಅ. ನ. ರ ಅಗ್ನಿ ಕನ್ಯೆ, ನಾಡಿಗೇರ ಕಸದ ಬುಟ್ಟಿ, ಶ್ರೀನಿವಾಸರ ಸವತಿ, ಗೋವಿಂದ ಭಟ್ಟರ ಮನೆ ಮರ್ಯಾದೆ, ಸಿದ್ದವ್ವನಹಳ್ಳಿ ಕೃಷ್ಣಶರ್ಮರ ಹೊಟ್ಟೆಗಿಲ್ಲುದುದೇಕೆ, ಘಾಣೇಕರರ ಗಾಂಧಿಟೋಪಿ, ಕೊಂದವರು ಯಾರು—ಜೋಶಿ, ಮಿರ್ಜಿಯವರ ಪ್ರಣಯ ಸಮಾಧಿ, ಇತ್ಯಾದಿ ಇತ್ಯಾದಿ; ಹೀಗೆ ಹೇಳುತ್ತ ಕುಳಿತರೆ "ತಿಂಮನ ತಲೆಯಲ್ಲೇನಿದೆ" ಎಂದು ಕೇಳಬೇಕಾದೀತು.

# ಪ್ರಾಂತದ ಕೂಗು



" ಎದ್ದೇಳು ಕನ್ನಡ ವೀರಾ, ನಿದ್ದೆಯಿಂದೆದ್ದೇಳು "

" ಯಾರದು ? "

" ನಾನು, ಪ್ರಾಂತ. ನಿನ್ನ ನಿದ್ರೆಗೆ ಮೆಚ್ಚಿ ಬಂದಿದ್ದೇನೆ. ಏಳು, ಕಂಣ ತೆರೆ "

" ನಿದ್ರೆಯಲ್ಲಿದ್ದೇನೆ, ನಾಳೆ ಬಾ ಪ್ರಾಂತ "

# ನಾಳೆ ಏನೊ?

ಇಪ್ಪತ್ತು ವರ್ಷಗಳ ಹಿಂದಿನ ಮಾತು. ವಿಷಯ ಚಿಕ್ಕದಾದರೂ ಚೆನ್ನಾಗಿ ನೆನಪಿದೆ. ನಾನು ಮರೆತರೂ ಹೊಟ್ಟೆಯ ಮೇಲಿನ ಬರೆಯಂತೂ ನೆನಪು ಕೊಡಲು ಇದ್ದೇ ಇದೆಯಲ್ಲ. ಆಡಾಡುತ್ತ ಹಿತ್ತಲಲ್ಲಿ ಹೋದಾಗ ನೋಡಿದೆ. ಲಿಂಬೆ ಹಣ್ಣಿನ ಗಾತ್ರದ ಕೆಂಪು ಹಣ್ಣುಗಳು ಚಿಕ್ಕೊಂದು ಗಿಡದಲ್ಲಿ ಸುರಿದಿದ್ದವು. ಕಣ್ಣಿಗೆ ಚಂದ ಕಂಡುದರಿಂದ ಒಂದನ್ನು ಕಿತ್ತಿ ಕೈಯಲ್ಲಿ ಹಿಡಿದೆ. ಹುಡುಗತನದ ಹುಡುಗಾಟಿಕೆ. ಬಾಯಿಗೂ ಸೇರಿಸಿದೆ. ಕೊಂಚ ಹುಳಿಯ ಮೇಲೆ ರುಚಿ ಇದ್ದಿತು. ಇನ್ನೂ ನಾಲ್ಕಾರು ಕಿತ್ತಿ ಕಿಸೆಗೆ ತುಂಬಿ ಒಂದೊಂದನ್ನೇ ತಿನ್ನುತ್ತ ಮನೆ ಒಳಕ್ಕೆ ಬಂದೆ. ಆಗ ನೋಡಬೇಕಿತ್ತು ನಮ್ಮಜ್ಜಿಯ ಮುಖವನ್ನು. ನನ್ನ ಕೈಯಲ್ಲಿಯ ಕೆಂಪು ಹಣ್ಣನ್ನು ಕಂಡಕೂಡಲೆ "ಅಯ್ಯಯ್ಯೋ?! ಅದನ್ನು ತಿಂದಿಯೇನೊ ಪಾಪಿಷ್ಟ? ಹುಚ್ಚು ಹಿಡಿಯುತ್ತೋ ಅದು" ಎಂದು ಚೀರಿದವಳೇ ಆ ಹಣ್ಣನ್ನು ಚರಂಡಿಯಲ್ಲಿ ಎಸೆದು ನನ್ನ ಕಿಸೆ ಕೈ ಎರಡೆರಡು ಬಾರಿ ನೀರಲ್ಲಿ ತೊಳೆದು ಅಳುತ್ತ ಕುಳಿತುಬಿಟ್ಟಳು ಅಜ್ಜಿ ಅಳುವುದನ್ನು ಕಂಡು ಗಾಬರಿಯಾಗಿ ನಾನೂ ಮಂಕನಂತೆ ಕುಳಿತೆ ನಾನು ಮಂಕನಂತೆ ಕುಳಿತಿದ್ದುವನ್ನು ಕಂಡು ಅಜ್ಜಿ ಗಾಬರಿಯಾಗಿ ಅಳಹತ್ತಿದಳು. ಅಕ್ಕ ಪಕ್ಕದ ಮನೆಯವರು ಓಡಿ ಬಂದರು. ಗೋಳಾಡುತ್ತ ಹೇಳಿಕೊಂಡಳು. "ಏನು ಮಾಡೋ

ದಮ್ಮ ಇವನಿಗೆ? ಹಿತ್ತಲಲ್ಲಿ ಹೋಗಿ ಹುಚ್ಚು ಹಣ್ಣು ತಿಂದುಬಿಟ್ಟಿದ್ದಾನೆ. ನೋಡಿ ಅವನ ಮುಖ ಹೇಗೆ ಮಂಕಾಗುತ್ತಿದೆ ಈಗಾಗಲೇ" ಹೋ ಎಂದು ಅತ್ತುಬಿಟ್ಟಳು. ನಿತ್ಯವೂ ನನ್ನನ್ನು ಮುದ್ದಿಸಿ, ತಿನ್ನಲು ಕೊಡುತ್ತಿದ್ದ ಎದುರು ಮನೆ ಅತ್ತೆ ನನ್ನನ್ನು ದುರು ದುರು ನೋಡಿ ಹತ್ತಿರ ಬರಲೂ ಅಂಜಿದಳು. ಆಗ ನಂಬಿಗೆಯಾಗ ಹತ್ತಿತು. ನಾನು ತಿಂದುದು ಹುಚ್ಚು ಹಣ್ಣು ಎಂದು. "ನಾನು ಯಾರು? ಹೇಳು ನೋಡೋಣ!" ಎಂದು ಮೂರು ಮೂರುಬಾರಿ ದೂರನಿಂತು ಕೇಳಿದಳು. ನನಗೇನು ಗೊತ್ತಿರಲಿಲ್ಲವೆ? ಆಕೆ ಗಂಡಸತ್ತವಳೆಂಬುದು? ಹೇಳಿಬಿಟ್ಟೆ ಆಕೆ ಯಾರೆಂಬುದನ್ನು. ಬಂದವರೆಲ್ಲರೂ ಚಿಟ್ಟನೇ ಚೀರಿ ಘಡಂಘಾಡಾದರು. ನನಗೆ ಹುಚ್ಚು ಹಿಡಿದಿದೆ ಎನ್ನಲು ಅವರಿಗೆ ಇನ್ನಾವ ರುಜುವಾತುಬೇಕು? ಕಟ್ಟಕಡೆಗೆ ಬಿಳೀ ಸೀರೆಯ ಮುದುಕಿಯೊಂದು ಸೂಕ್ತ ಸಲಹೆ ಕೊಟ್ಟಿತಂತೆ, ನನಗೆ ಹುಚ್ಚು ಬಿಟ್ಟಮೇಲೆ ಅಜ್ಜಿ ಆಗಾಗ ಹೇಳುತ್ತಿದ್ದಳು. ಹೊಟ್ಟೆಯ ಮೇಲೆ ಎರಡು ಬರೆ ಹಾಕಿದರು. ಕೂಡಲೇ ಹುಚ್ಚು ಹಾರಿತು. ಆದರೂ ನಾನು ಯಾರೆಂದು ಎದುರು ಮನೆಯ ಅತ್ತೆ ಮಾತ್ರ ಮತ್ತೆಂದೂ ಕೇಳಲಿಲ್ಲ.

ಆ ಹುಚ್ಚು ಹಣ್ಣು ತಿನ್ನದ ದಿನವೇ ಇಲ್ಲ ಈಗ, ರುಚಿಸಲಿ ಬಿಡಲಿ, ಸಂತೆಯಲ್ಲಿ ದೊರೆಯಲಿ ಬಿಡಲಿ, ಕೊಳ್ಳಲು ಹಣವಿರಲಿ ಇಲ್ಲದಿರಲಿ. ಅಂತೂ ನಿತ್ಯವು ನಾಲ್ಕನ್ನಾದರೂ ತಿನ್ನಲೇಬೇಕು; ಡಾಕ್ಟರರ ಆಜ್ಞೆ. ಆ ಹುಚ್ಚು, ಹಣ್ಣನ್ನು ಒಂದು ದಿನ ತಿನ್ನದಿದ್ದರೆ, ಇಡೀ ದಿನವೆಲ್ಲ ಹುಚ್ಚು ಹಿಡಿದಂತೆಯೇ ಇರುತ್ತದೆ. ನಾನೊಬ್ಬನೇ ಅಲ್ಲ, ಅದನ್ನು ಪ್ರತಿಯೊಬ್ಬರೂ ತಿನ್ನುತ್ತಿದ್ದಾರೆ, ಹೆಚ್ಚು ಹೆಚ್ಚು. ನಮ್ಮ ವಿಜ್ಞಾನ ಕೊಟ್ಟ ತಿಳುವಳಿಕೆಯ ಫಲ. ಈ ಹಣ್ಣಲ್ಲಿ 'ಟಿ' ವಿಟಮಿನ್ ಇದೆ ಎಂದು ಈಗೀಗ ಅಜ್ಜಿ ಸತ್ತಮೇಲೆ ಕಂಡುಹಿಡಿದಿದ್ದಾರೆ. ಅಂತೆಯೇ ಇದಕ್ಕೆ "ಟೊಮೊಟೊ" ಎಂದು ಬಂದಿರಬೇಕು. ನಮ್ಮ ಅಜ್ಜಿ ಮಾತ್ರ ಬದುಕಿದ್ದರೆ, ಲಕ್ಷಗಟ್ಟಲೆ ಜನಕ್ಕೆ ಬರೆ ಹಾಕುತ್ತಿದ್ದಳೇನೋ ಎಂದು ನಕ್ಕುಬಿಟ್ಟರೆ ಆಯಿತೆ? ಟೊಮೆಟೊ ತಿನ್ನುವುದರಿಂದ 'ಟಿ' ವಿಟಮಿನ್ ಹೆಚ್ಚಾಗಿ

## ಹುಚ್ಚು — ಹುರುಳು

ಮೆದುಳು ಕೆಡುತ್ತೆ ಎಂದೊಬ್ಬ ವಿಜ್ಞಾನಿ ಹೇಳಿದರೆ ಆಯಿತು. ಸರಕಾರವು ಬರೆ ಖಾತೆಯನ್ನು ಕೂಡಲೇ ನೇಮಿಸಿ, ವ್ಯಾಕ್ಸಿನೇಶನ್ ಮೈಲಿಗಳನ್ನು ಹಾಕಿಸಿದಂತೆ ಎಲ್ಲರಿಗೂ ಮನೆ ಮನೆಗೆ ಬಂದು ಬರೆ ಹಾಕುವ ಏರ್ಪಾಟು ಮಾಡಲೇಬೇಕು. ' ಟ ' ವಿಟಮಿನ್ ಒಬ್ಬ ವಿಜ್ಞಾನಿಗೆ ಸಿಕ್ಕರೆ ' ಹು ' ವಿಟಮಿನ್ನು ಇದೇ ಹಣ್ಣಲ್ಲಿ ಇನ್ನೊಬ್ಬ ವಿಜ್ಞಾನಿಗೆ ಸಿಗಕೂಡದೇಕೆ ? ಕೂಡಲೆ ಟೊಮೆಟೊ ಹುಚ್ಚು ಹಣ್ಣು ಆಗಲೇಬೇಕಲ್ಲವೆ ವಿಜ್ಞಾನಿ ವಿಧಿಸಿದ ಮೇಲೆ ?

ಶಾಲಿವಾಹನ ಶಕ, ಕ್ರಿಸ್ತ ಶಕ, ಗಾಂಧೀ ಶಕ ಎಂಬ ಈ ಶಕಗಳು ಹೊರಟಂತೆ ಹಲವೇ ವರ್ಷಗಳ ಹಿಂದೆ ಒಂದು ' ಡಾಲ್ಡಾ ಶಕವು ' ಬಂದಿತಷ್ಟೆ? ಡಾಲ್ಡಾ ಶಕದಲ್ಲಿ ಮಾತ್ರ ಆ ಡಾಲ್ಡಾ ತುಪ್ಪಕ್ಕೆ ಇಂದಿನಂತೆ ಡಾಲ್ಡಾ ಎಣ್ಣೆ ಎಂದೇನಾದರೂ ಎಂದಿದ್ದರೆ ಅಂದವನಿಗೆ ಆರು ತಿಂಗಳ ಶಿಕ್ಷೆ, ಐದುನೂರು ರೂಪಾಯಿ ದಂಡ ತಪ್ಪುತ್ತಿರಲಿಲ್ಲ. ಅಡಿಗೆಗೆ, ಊಟಕ್ಕೆ, ಕರಿಯಲಿಕ್ಕೆ, ಕಲಸಲಿಕ್ಕೆ, ಮಾಸಗೆ, ಸ್ನಾನಕ್ಕೆ, ತಲೆಗೆ, ಚಳಿಯಿಂದ ತುಟಿಯೊಡದರೆ, ಉಷ್ಣದಿಂದ ಕಾಲೊಡೆದರೆ, ಪಿತ್ತದಿಂದ ಪೈಯೊಡೆದರೆ, ಜಗಳದಿಂದ ತಲೆಯೊಡದರೆ, ದೇವರ ದೀಪಕ್ಕೆ, ಎಲ್ಲಕ್ಕೂ ಡಾಲ್ಡವೇ ಡಾಲ್ಡ. ಇದ್ದಕ್ಕೆ ಇದ್ದಂತೆ ಡಾಲ್ಡಾ ತುಪ್ಪವು, ಡಾಲ್ಡಾ ಎಣ್ಣೆಯಾಗಿ ಧುಪ್ಪೆಂದು ಬಿದ್ದಿತು. ವಿಜ್ಞಾನಿಯು ಒದ್ದರೆ ನಿಲ್ಲುವ ತ್ರಾಣವು ಡಾಲ್ಡಾನ ಅಪ್ಪನಿಗಾದರೂ ಇದೇಯೆ ? ಡಾಲ್ಡಾ ತಿಂದರೆ ಕಣ್ಣು ಹೋಗುತ್ತೆ ಎಂದೊಬ್ಬ ವಿಜ್ಞಾನಿಯು ಹೇಳಿಬಿಟ್ಟರು. ತಕ್ಷಣ ಎಲ್ಲರಿಗೂ ದೃಷ್ಟಿ ಮಸಕಾಗಿದೆಯೋ ಎಂಬ ಅನುಮಾನ ಸುರುವಾಯಿತು. ಚಿಕ್ಕ ಮಕ್ಕಳಿಗೂ ಕನ್ನಡಕ ಬಂದಿತು. ಬುದ್ಧಿ ಇಲ್ಲದೆ ಒಂದಿಲಿಯು ಡಾಲ್ಡಾ ತಿಂದುದೇ ಇದಕ್ಕೆ ಕಾರಣವಾಯಿತಂತೆ.

ಅದೇಕೋ ಆ ಇಲಿ ಕುರುಡಾಯಿತಂತೆ. ಡಾಲ್ಡಾ ತಿಂದರೆ ಕುರುಡು ಬರುತ್ತೆ ಎಂದು ಬಿಟ್ಟರು, ಆ ಕ್ಷಣ. ಇಲಿಗೆ ಬಂದರೆ ಮನುಷ್ಯನಿಗೂ

ಬಂದೇ ತೀರಬೇಕೆ ಕುರುಡು! ಮದ್ಯಪಾನ ನಿರೋಧ ಅಮೇರಿಕೆಯಲ್ಲಿ ಸಾಧ್ಯವಾಗಲಿಲ್ಲ ಕಾರಣ ಇಲ್ಲಿಯೂ ಆಗದು ಎಂದಂತೆ! ಆದರೆ ಅನೇ ಕರಿಗೆ ಕುರುಡು ಬಂದಿತು ಸ್ವಲ್ಪ ಸಾವಕಾಶವಾದರೂ. ಜಾತ್ಯಾಂಧತೆ, ಅಧಿಕಾರಾಂಧತೆ ಮುಂತಾದ ಅಂಧತೆಗಳು ಬಂದವರೆಲ್ಲರೂ ಡಾಲ್ಡಾ ತಿಂದಿಲ್ಲವೆಂದು ಹೇಳುವದಾದರೂ ಹೇಗೆ? ಮನುಷ್ಯನ ಮಾತು ಹಾಗಿರಲಿ. ದೇವ ಇಂದು ಪೂರ್ಣ ಕುರುಡನಾಗಿ ಕಣ್ಣು ಮುಚ್ಚಿ ಕುಳಿತಿದ್ದಾನೆಂಬು ದಂತೂ ಕುರುಡರಿಗೂ ಸ್ಪಷ್ಟವಾಗಿಯೇ ಕಾಣುತ್ತಿದೆಯಲ್ಲ? ಅವರಿಗೇಕೆ, ಸ್ವತಃ ದೇವರ ಕಣ್ಣಿಗೇ ಕಾಣುತ್ತಿದೆಯಂತೆ, ತನಗೆ ಕಣ್ಣಿಲ್ಲವೆಂಬುದು. ಭಕ್ತರು ಹಚ್ಚಿಟ್ಟ ಡಾಲ್ಡಾ ತುಪ್ಪದ ದೀಪದ ಮುಂದೆ ಕುಳಿತೇ ನನ್ನ ಕಣ್ಣು ಹೋಯಿತೋ ಎಂದು ಇವನ ದೂರು. ಆ ಇಲಿಯು ಡಾಲ್ಡಾ ತಿನ್ನಲು ಒಪ್ಪಿರದಿದ್ದರೆ ಬಹುಶಃ ವಿಜ್ಞಾನಿಯೂ ಸುಮ್ಮನಿರುತ್ತಿದ್ದ. ಮಾನ ವನಿಗೂ—ದೇವರಿಗೂ ಸಹ ಕುರುಡು ಬರುತ್ತಿರಲಿಲ್ಲ.

ಮಾಮೂಲಾಗಿ ಮನೆಗೆ ಹೋಗುವ ಹೊತ್ತು ಇನ್ನೂ ಆಗಲಿಲ್ಲ ವೆಂದು ನನ್ನ ಡಾಕ್ಟರ ಗೆಳೆಯರ ಬಳಿ ಹೊರಟೆ. ಹೆಚ್ಚು ಸಿಗರೇಟು ಸೇದಿ ಬೇಜಾರಾಗಿ, ಬೇಜಾರು ಕಳೆದುಕೊಳ್ಳಲು ಮತ್ತೊಂದು ಸಿಗರೇಟು ಹಚ್ಚಿದರು. ಅವರು ಮನೆಗೆ ಹೋಗುವ ಗಡಬಿಡಿಯಲ್ಲಿ ಇದ್ದಂತಿದ್ದಿತು. "ಏನು ವಿಶೇಷ, ಬಹಳ ದೂರ ಬಂದಿರಿ" ಎಂದು ಡಾಕ್ಟರು ವಿಚಾರಿಸಿ ದರು. "ನನ್ನ ಚಿಕ್ಕ ಕೂಸಿಗೆ........"ಎಂದು ಸುರು ಮಾಡಿದೆ. ನಾನು ಮಾತು ಮುಗಿಸುವ ಮುನ್ನವೇ "ಆಯಿತು. ಒಂದು ಕೋರ್ಸು ಪೆನ್ಸಿಲಿ ಯನ್ ಕೊಡೋಣ" ಎಂದು ನುಡಿದರು. "ಅಲ್ಲ ಡಾಕ್ಟರೆ, ನನ್ನ ಮಗುವಿಗೆ........"ಪುನಃ ನನ್ನ ಮಾತು ಅರ್ಧಕ್ಕೇ ಉಳಿಯಿತು. "ಏನಾ ಗಿದೆ ಎಂದಿರಿ ಕೂಸಿಗೆ, ಏನಾದರೂ ಆಗಿರಲಿ—ಪೆನ್ಸಿಲಿಯನ್ ಕೊಟ್ಟು ಬಿಟ್ಟರಾಯಿತು." ಎಂದರು. "ನಾನು ಹೇಳುವದನ್ನು ಕೊಂಚ ದಯ ವಿಟ್ಟು ಕೇಳಿರಿ, ನನ್ನ ಮಗುವಿಗೆ........" "ನೀವು ಏನೂ ಹೇಳುವದು

ಬೇಡ ಎಂದೆನಲ್ಲ, ಸರ್ವರೋಗ ನಿವಾರಿಣಿ ಸ್ವಾಮಿ ಇದು. ಪೆನ್ಸಿಲಿಯನ್ ಎಂದರೆ ನೀವೇನು ತಿಳಿದಿರಿ? ಸಾಕ್ಷಾತ್ ಸಂಜೀವಿನಿ ಇದು." "ಅಯ್ಯೋ ರಾಮಚಂದ್ರ! ನನಗೂ ಮಾತನಾಡಲು ಒಂದು ಚಾನ್ಸು ಕೊಟ್ಟು ನೋಡಿ ಡಾಕ್ಟರೇ. ನೀವು ಹೇಳಿದುದು ಸುಳ್ಳೆಂದು ಹೇಳಲಿಲ್ಲ ನಾನು. ನಿಮ್ಮ ಪೆನ್ಸಿಲಿಯನ್ ಇಂದಲೇ ಮೂರ್ಛಿತನಾದ ಲಕ್ಷ್ಮಣನು ಸಹ ಎದ್ದು ಕುಳಿತನೆಂಬುದನ್ನೂ ಒಪ್ಪುತ್ತೇನೆ. ಬರೀ ಕಾಂಪೌಂಡರುಗಳಷ್ಟೇ ಏಕೆ? ನಮ್ಮ ದರ್ಜಿಯು ಸಹ ಈಗ ಇದೇ ಇಂಜಕ್ಷನ್ ಕೊಡುತ್ತಿದ್ದಾನೆಂಬುದನ್ನು ನಾನು ಬಲ್ಲೆ. ನಾನು ಹೇಳಿದ್ದು ಏನೆಂದರೆ, ನನ್ನ ಮಗುವಿಗೆ........" "ಹೇಳಿ ಹಾಗಾದರೆ ನಿಮ್ಮಂತೆಯೇ ಆಗಲಿ. ಏನಾಗಿದೆ ನಿಮ್ಮ ಮಗುವಿಗೆ?" "ದೇವರ ದಯೆಯಿಂದ ಏನೂ ಆಗಿಲ್ಲ ಡಾಕ್ಟರೆ. ನಾನು ಹೇಳಬೇಕೆಂದು ಇದ್ದುದು ಇದೇ. ನನ್ನ ಮಗುವಿಗೆ ಒಂದು ಅಂಗಿ ಹೊಲಿಸಬೇಕೆಂದು ಊರಲ್ಲಿ ಬಂದಿದ್ದೆ ಎಂದು ಹೇಳಬೇಕೆಂದಿದ್ದೆ." "ಓಹೋ ಅಂಗಿ ಹೊಲಿಸಬೇಕು ಎಂದಿರಾ, ಸರಿ ಸರಿ" ಎಂದು ನನ್ನದೇ ತಪ್ಪೇನೋ ಎನ್ನುವಂತೆ ನಕ್ಕುಬಿಟ್ಟರು. ಅಂದಿನಿಂದ ಅವರ ಹೆಸರೇ "ಪೆನ್ಸಿಲಿಯನ್ ಡಾಕ್ಟರು" ಆಯಿತು. ಪಾಪ, ಪೆನ್ಸಿಲಿಯನ್‌ಗೂ ಡಾಲ್ಡಾದ ಗತಿ ಬಂದರೆ ಏನು ಗತಿಯೋ!

"ಕನ್ನಡ ಕವನದಿಂದಾಗಲೀ, ಕಣ್ಣು ದೋಷದಿಂದಾಗಲಿ, ಮಲಬದ್ಧತೆಯಿಂದಾಗಲಿ, ತಮಿಳು ಚಿತ್ರದಿಂದಾಗಲೀ, ತೆಲಗು ನಾಟಕದಿಂದಾಗಲೀ, ಅಥವಾ ಬೇರಾವ ದುಷ್ಟ ಕಾರಣಗಳಿಂದಾಗಲೀ ತಲೆ ನೋವು ಬಂದರೆ ನಮ್ಮ ಆಸ್ಪಿರನ್ ಮರೆಯಬೇಡಿರಿ." ಎಂದೊಂದು ಜಾಹೀರಾತು. ಆಗೊಂದು ಆಸ್ಪಿರನ್ ಸಮಾರಾಧನೆಯೇ ಜರುಗಿತು. ತಲೆಯಿಲ್ಲದವರಿಗೂ ತಲೆ ನೋವು ಬಂದಿತು. ಮಕ್ಕಳು ಪೆಪ್ಪರಮೆಂಟಿಗೆ ಅತ್ತು ತಿಂದಂತೆ ಮಕ್ಕಳ ತಂದೆ ತಾಯಿಗಳು ಆಸ್ಪಿರನ್ ತಿಂದರು. "ಆಸ್ಪಿರನ್ ಹೃದಯಕ್ಕೆ ಬಹಳ ಕೆಟ್ಟುದು" ಎಂದು ಯಾರಿಗೆ ಯಾರೋ

ಹೇಳಿದರಂತೆ. ಸರಿ, ಮುಗಿಯಿತು ಅದರ ಕತೆ. ಹೃದಯ ವಿಲ್ಲದವರು ಸಹ ಭಯಪಟ್ಟು ಅದನ್ನು ತಿನ್ನುವುದನ್ನು ನಿಲ್ಲಿಸಿಯೇ ಬಿಟ್ಟರು. ಆಸ್ಪಿ-ರನ್ ಹೃದಯಕ್ಕೆ ಕೆಟ್ಟದಾದರೆ ಕೆಟ್ಟ ಹೃದಯದವರಿಗೇಕೆ ಭಯ? ಹೃದಯ ಇಲ್ಲದವರ ಮುಂದೆ ಅದರ ಆಟವಾದರೂ ಏನು ಸಾಗೀತು!

ಹಲವು ದಿನಗಳ ಹಿಂದೊಂದು 'ಸಿಬಿಜಾಲ್' ಯುಗ ಬಂದಿದ್ದಿತು. ಆ ಯುಗವು ಇಂದೂ ಇದ್ದಿದ್ದರೆ ಸಿಬಿಜಾಲ್ ಅಂಗಡಿಯ ಮುಂದೆ ರೇಶನ್ ಕಾರ್ಡ್‌ನೊಂದಿಗೆ ಎಲ್ಲರೂ ಕ್ಯೂನಲ್ಲಿ ಸಾಲಾಗಿ ನಿಲ್ಲಬೇಕಿತ್ತು. ಹಸಿವೆ ಆಗದಿದ್ದರೆ ಸಿಬಿಜಾಲು, ಬಾಯಾರಿಕೆ ಆದರೆ ಸಿಬಿಜಾಲು, ಸಿಟ್ಟಿನಿಂದ ಕಣ್ಣು ಕೆಂಪಾದರೆ ಸಿಬಿಜಾಲು, ಆಶೆಯಿಂದ ಬಾಯಲ್ಲಿ ನೀರೊಡೆದರೆ ಸಿಬಿಜಾಲು, ಸಿಬಿಜಾಲು ತಿಂದು ಪಿತ್ತವಾದರೆ ಸಿಬಿಜಾಲು. ಅದೇಕೋ ತಿಳಿಯದು, ಹಳೆಯ ಸಿನೆಮಾ ನಟಿಯಂತೆ ಹಿಂದು ಬಿದ್ದಿತು ಸಿಬಿಜಾಲು ಈ ಮಧ್ಯೆ.

ಸದ್ಯಕ್ಕೆ ಇಡೀ ಜಗತ್ತಿಗೆ ಸರ್ವರೋಗ ನಿವಾರಣೆ ಒಂದೇ, ಆಟಂ ಬಾಂಬು. ನಾಳೆ ಏನೋ? ಬಾಟಂ ಬಾಂಬು ಹುಟ್ಟಿದರೆ!



# ಮುದ್ರಾರಾಕ್ಷಸಿ

ಇದೇನು ಅವಮಾನವೆಂದು ಸ್ತ್ರೀಯರೆಲ್ಲರೂ ಸಿಟ್ಟಿಗೆ ಬಂದು ಸಂಪು ಹೂಡುವದು ಬೇಡ ಸದ್ಯ. 'ಸಿ' ಅನ್ನುವದು 'ಸ' ಅನ್ನುವದಕ್ಕೆ ಆದ ಮುದ್ರಾರಾಕ್ಷಸನ ಹಾವಳಿಯ ಪರಿಣಾಮ ಅಷ್ಟೆ. ಅಚ್ಚಿನ ಮನೆಯಲ್ಲಿ ಮೊಳೆ ಜೋಡಿಸುವವರ ಮೇಲೆ ನಿಮಗೂ ಕೊಂಚ ಕೋಪ ಬರಲೆಂದು ಬುದ್ಧಿಪೂರ್ವಕ ಮಾಡಿದ ಪರಪಾಟ ಇದು. 'ಬೈ' ಬೀಳುವಲ್ಲಿ 'ಕೈ' ಬೀಳಬಹುದು ಒಂದೊಂದು ಬಾರಿ. ಪಾಪ! ಮೊಳೆ ಜೋಡಿಸುವವರೂ ತಪ್ಪು ಮಾಡುವ ಮನುಷ್ಯ ಜಾತಿಗೆ ತಾನೆ ಸೇರಿದವರು? ಆದರೆ ಬರೀ ಬೈ ಬೀಳುವಲ್ಲಿ ಕೈ ಬಿದ್ದರೆ ಆಗುವ ಪ್ರಮಾದದಿಂದ, ಅದೇ ಕೈ ಯಿಂದ ಹಣೆ ಬಡಿದುಕೊಳ್ಳಬೇಕಾಗುತ್ತೆ ಆ ಮೇಲೆ.

ಊರಲ್ಲಿ ಒಂದು ಬಾರಿ ಚುನಾವಣೆ ರೋಗ ಹಬ್ಬಿತು. ಎಲ್ಲಿ ನೋಡಿದರೂ ಜನಸಂದಣಿ, ರಸ್ತೆ ತುಂಬ ಗಾಡಿಗಳು. ಆರಡಿ ಎತ್ತರ ಮೂರಡಿ ಅಗಲದ ಅಕ್ಷರಗಳುಳ್ಳ ಹಾಸಿಗೆಯಂತಹ ಕಾಗದಗಳು ಗೋಡೆ ಗೋಡೆಗೂ ನಿಂತಿವೆ. ಎದುರಿನಲ್ಲಿ ಈ ವಾಕ್ಯವನ್ನು ಓದಿ ಕಕ್ಕಾಬಿಕ್ಕಿಯಾಗಿ ಹಾಗೆಯೇ ನಿಂತೆ.

"ಕೋತಿ ಮಾರ್ಕುಗಳ್ಳ ಅಸದುಲ್ಲಾರಿಗೇ ನಿಮ್ಮ ಘನವಾದ ಮಗಳನ್ನು ಕೊಡಿರಿ"! ಏನು ಇದು, ಅಸದುಲ್ಲಾರ ತಲೆ! ಕೈ ತಿಕ್ಕುತ್ತ ಮುಂದೆ ನಿಂತ ಅಸದುಲ್ಲಾರ ಏಜಂಟ ಹೇಳಿದ. "ಅಚ್ಚಿನಲ್ಲಿ ಕೊಂಚ ತಪ್ಪಿದೆ, ಸ್ವಾಮಿ. ಕೋಳಿ ಮಾರ್ಕುಗಳ್ಳ ಅಸದುಲ್ಲಾರಿಗೇ ನಿಮ್ಮ ಘನವಾದ ಮತಗಳನ್ನು ಕೊಡಿರಿ ಎಂದಿರಬೇಕಿತ್ತು" ಎಂದು ಬರೆದವನ ಮನಸಿನಲ್ಲಿದ್ದುದಕ್ಕೆ ಭಾಷ್ಯವನ್ನು ಮಾಡಿದ. ಸದ್ಯ ಮಗಳು ಉಳಿದಳು ಎಂದು ಮನೆಗೆ ನಡದೆ.

ಮೊಳೆ ಜೋಡಿಸುವವರು ಪಂಚಮ ದಳದವರಿರಬಹುದೇ? ಎಂದು ಯೋಚಿಸುತ್ತ ಹಾಗೆಯೇ ಮನೆ ಮುಟ್ಟಿದಾಗ ಮೇಜಿನಮೇಲೆ ಪೋಸ್ಟು ಕುಳಿತಿದ್ದಿತು. ಒಂದಂತೂ ವಿವಾಹ ಮಹೋತ್ಸವಾಹ್ವಾನ ಪತ್ರಿಕೆ. ಮದುವೆ ಯಾರದು ಎನ್ನುವದೊಂದನ್ನುಬಿಟ್ಟು ಬೇರೆ ಎಲ್ಲವೂ ಳಿಯಿತು.

| | |
|---|---|
| ನನ್ನ ತಮ್ಮನ ಮಗನಾದ ರಾಮರಾಯನಿಗೆ | ರಾ. ಶ್ರೀ ಹನುಮಂತರಾಯರ ಮಗನಾದ ಸೀತೂನೊಂದಿಗೆ |

ಎಂದಿದ್ದಿತು. ಎರಡೂ ವರಗಳೇ!

"ಹನುಮಂತರಾಯರ ಮಗಳು, ಸೀತೂ ಅವಳ ಮದುವೆ" ಎಂದಳು ನನ್ನ ಅವಳು ಹಿಂದಿನಿಂದ. ಪುರುಷರಿಬ್ಬರ ಮದುವೆಗಳು ಜರುಗಿದರೆ ನನ್ನ ಮಗಳಿಗೆ ಇನ್ನೇನು ವರ ಸಿಕ್ಕೀತೆಂದು ದಿಗಿಲಾಗಿತ್ತು. ಜೊತೆಯಲ್ಲಿದ್ದ ಇನ್ನೊಂದು ಲಕ್ಕೋಟೆಯನ್ನು ತೆಗೆದೆ. ಗಾತ್ರದ ಮೇಲೆಯೇ ತಿಳಿಯಿತು, ನನ್ನ ಕತೆ ಮರಳಿ ಬಂದಿದೆಯೆಂದು. ಹೋಗಿ ಬರುವ ಚಾರ್ಜು ಕೊಟ್ಟೇ ಕಳುಹಿದ್ದೆ ನನ್ನ ಕತೆಗೆ. ಸಂಪಾದಕರ ಪ್ರಾಮಾಣಿಕ ತನಕ್ಕೆ ಮೆಚ್ಚಿ, ಒಳ ನೋಡಿದೆ. ಮುದ್ದಾಗಿ ಅಚ್ಚಾಗಿದ್ದ ಪತ್ರದೊಂದಿಗೆ ನನ್ನ ಕತೆಯೂ ಬಂದಿದ್ದಿತು. ಸಂಪಾದಕರ ಪತ್ರದಲ್ಲಿ ಇಷ್ಟೇ ಇದ್ದುದು.

"ನಿಮ್ಮ ಕತ್ತೆಯ ಬೆಳವಣಿಗೆ ಬಹು ಚೆನ್ನಾಗಿದೆ. ಓಟವೂ ಇದೆ.

ಆದರೆ ನಮ್ಮ ಪತ್ರಿಕೆಯಲ್ಲಿ ಎಡೆಯಿಲ್ಲವೆಂದು ತಿಳಿಸಲು ವಿಷಾದಿಸುತ್ತೇನೆ" ಸಾಲದೇ, "ತ್ತ"ದಿಂದ ಇಷ್ಟು ಪ್ರಮಾದವಾದರೆ?

ಕಾರ್ಯಬಾಹುಳ್ಯದ ಮೂಲಕ ನಾಲ್ಕು ದಿನಗಳು ಮದರಾಸಿಗೆ ಹೋಗಬೇಕಾಯಿತು. ಆ ಊರಲ್ಲಿ ಎಲ್ಲಿ ಉಳಿಯಬೇಕೆಂದು ಅನುಮಾನಿಸುತ್ತಿದ್ದಾಗ ಸಿಕ್ಕೆ ಬಿಟ್ಟಿತು ಜಾಹೀರಾತು. "ಒಂದು ಬಾರಿ ನನು ಮದರಾಸಿ ಡಾಡ್ಜಿಂಗ ಹೌಸಿನಲ್ಲಿ ಇಳಿದು ನೋಡಿರಿ"—(ನಿಮ್ಮ ಹಾಸಿಗೆ ಟ್ರಂಕು ಉಳಿದೀತೇ, ಎಂದೇಕೋ ಮುಂಪೆ ಹಾಕಿರಲಿಲ್ಲ!) ಎದುರು ಫುಟದಲ್ಲಿದ್ದುದು "ಗುಜರಾಥಿ ಹೋರ್ಡಿಂಗ ಹೌಸ"; ಇದಕ್ಕೇ ಏನೋ ಮದರಾಸಿಗಳು ಉತ್ತರಾದಿಗಳೆಂದರೆ ಕಣ್ಣು ಕಿಸಿಯುವದು ಎಂದುಕೊಂಡೆ.

ಓದುವಾಗ ಬರುವ ಅಚ್ಚಿನ ತಪ್ಪುಗಳು ಉಣ್ಣುವಾಗ ಅನ್ನದಲ್ಲಿ ಬರುವ ಹರಳಿನಂತೆ. ಅರ್ಧ ಹರಳು, ಇನ್ನರ್ಧ ಕಸ ಇದ್ದುದನ್ನು ಇಂದು ನಾವು ಅಕ್ಕಿ ಎಂದುಕೊಂಡು ತಿನ್ನುತ್ತಿಲ್ಲವೆ? ತಪ್ಪುಗಳಿದ್ದರೆ ಇರಲಿ ಎಂದು ದೊಡ್ಡ ಮನಸ್ಸುಮಾಡಿ ೩೨ ಪುಟದ ವಾರಪತ್ರಿಕೆಯೊಂದನ್ನು ಎರಡಾಣೆ ಕೊಟ್ಟು ಕೊಂಡೆ. ಮೊದಲನೆಯ ಪುಟದಲ್ಲಿಯೇ "ಏಕೀಕರಣ"! ಸೂಜಿಗಲ್ಲಿನ ಸೆಳೆತಕ್ಕೆ ಬಿದ್ದಂತಾಯಿತು- ಯಾವ ಕನ್ನಡಿಗನಿಗೆ ಆಗಲಿಕ್ಕಿಲ್ಲ? ಕನ್ನಡಕವನ್ನು ಹಣೆಗೆ ಏರಿಸಿ, ದೀರ್ಘ ಲೇಖವನ್ನು ಓದಲೇಬೇಕೆಂದು ನಿಶ್ಚಯ ಮಾಡಿ ಪ್ರಾರಂಭ ಮಾಡಿದೆ. ತಲೆಬರಹವನ್ನು ಓದಿದ ಕೂಡಲೆ ರಕ್ತ ಕುದಿಯಿತು. "ಏಕೀಕರಣಕ್ಕೆ ಹುಚ್ಚು ಜನರ ಬೆಂಬಲವಿದೆ" ಎಂದಿರಬೇಕೆ? ನಾನೂ ಬೆಂಬಲಕೊಟ್ಟವನೇ. ಮುಂದಿನ ವಾಕ್ಯದಲ್ಲಿದ್ದಿತು ಹೆಚ್ಚು ಜನರ ಬೆಂಬಲವೆಂದು. ಕೈ ಮುಗಿದು ಮುಂದಿನ ಪುಟ ತಿರುವಿದೆ. "ಬರಗಾಲದ ಮುಖ್ಯ ಮಂತ್ರಿಗಳು ಹಲ್ಲಿ ಹಿಡಿದರು" ಎಂದಿದ್ದಿತು. ಮೂರು ಹಗಲು ಮೂರು ರಾತ್ರಿ ಯೋಚಿಸಿದೆ, ಅವರು ಹಲ್ಲಿಯನ್ನು ಏಕೆ ಹಿಡಿದಿರಬಹುದೆಂದು. ಬರಗಾಲವೇನಾದರೂ ಕಾರಣವಿರಬಹುದೇ ಎಂದುಕೊಂಡೆ. ಕಡೆಗೊಬ್ಬರು ಹೇಳಿದರು "ಬಂಗಾಲದ ಮುಖ್ಯ ಮಂತ್ರಿಗಳು ದಿಲ್ಲಿ ಹಿಡಿದರು" ಎಂದು.

ಕಡೆಯ ಪುಟಪ್ರೊಂವನ್ನು ನೋಡಿ ಊಟಕ್ಕೆ ಎದ್ದರಾಯಿತು ಎಂದು ಮುಂದೆ ಸಾಗಿದೆ. ಎಡಗಡೆ ಮೂಲೆಯಲ್ಲಿದ್ದೊಂದೇ ವಾರ್ತೆಯು ತಂಣಗೆ ಮಾಡಿತು.

"ಜಲಗಾಂವ ಲಾಲ ಮುಹತಾರವರು ವೈಕುಂಠಕ್ಕೆ ಹೊರಟರು" ಇದರ ಇತ್ಯರ್ಥವಾಗಲೇಬೇಕೆಂದು ಎದ್ದು ಬಾಗಿಲಿಗೆ ಬಂದೆ. "ಊಟದ ಹೊತ್ತಿನಲ್ಲಿ ಎಲ್ಲಿಗೆ ಸವಾರಿ" ಎಂದು ಅವಳ ಪ್ರಶ್ನೆ ಹಿಂದೆಯೇ ಬಂದಿತು. ಪತ್ರಿಕೆಯನ್ನು ಅವಳ ಕೈಯಲ್ಲಿಕ್ಕಿ ಆ ವಾಕ್ಯವನ್ನು ತೋರಿಸಿ ಏನಿದರ ಅರ್ಥ ಎಂದೆ. ಒಳಗಿನಿಂದ ಇನ್ನೊಂದು ಪತ್ರಿಕೆಯನ್ನು ತಂದು ತೋರಿಸಿದಳು.

"ವೈಕುಂಠಲಾಲ ಮುಹತಾರವರು ಜಲಗಾಂವಕ್ಕೆ ಹೊರಟರು" ಎಂದಿಟ್ಟಿತು.

"ಯಾವದೇ ರೀತಿಯ ವಸ್ತ್ರಗಳನ್ನು ಎರಡು ತಿಂಗಳ ವರೆಗೆ ಯಾರೂ ಹಾಕಕೂಡದೆಂದು ದಿಲ್ಲಿ ಮ್ಯಾಜಿಸ್ಟ್ರೇಟರ ಆಜ್ಞೆ" ಎಂದೊಂದು ವೃತ್ತಪತ್ರಿಕೆ ಸಾರಿತು. ಬಟ್ಟೆ ಕೊರತೆಯಾಗಿರುವದೇನೋ ನಿಜ. ಆದರೆ ಇದ್ದೆರಡು ಬಟ್ಟೆಗಳನ್ನು ಧರಿಸಲೂ ಮ್ಯಾಜಿಸ್ಟ್ರೇಟರ ಆಕ್ಷೇಪಣೆಯೇ? ನಾಚಿಕೆಗೇಡು! "ಸಮವಸ್ತ್ರಗಳನ್ನು ಹಾಕಕೂಡದೆಂದು" ಅವರ ಆಜ್ಞೆಯಂತೆ, ಆ ಮೇಲೆ ತಿಳಿಯಿತು. ಅಚ್ಚಿನ ಮನೆಯವರು 'ಸಮ'ವನ್ನು ತಿಂದರೆ ಮ್ಯಾಜಿಸ್ಟ್ರೇಟರದೇನು ತಪ್ಪು. ಪಾಪ!

ಜಾಹೀರಾತುಗಳಲ್ಲಿಯೂ ತಪ್ಪುಗಳಿಂದರೆ ಕೊಂಚ ಯಾರಿಗಾದರೂ—ಜಾಹೀರಾತಿಗೆ ಹಣ ಕೊಟ್ಟವರಿಗಾದರೂ ಕಷ್ಟ ಅಲ್ಲವೇ? ಸಂಗೀತ ಕಲಿತ ಸಲಕ್ಷಣ ಕನ್ನೆಯನ್ನು ಮದುವೆ ಯಾಗಲು ಒಬ್ಬ ರಸಿಕ ಯುವಕ ಬೇಕಾಗಿದೆ ಎನ್ನುವದರಲ್ಲಿ 'ರಸಿಕ' ಎನ್ನುವದು 'ರಜಕ' ಆಯಿತು. ಏನು, ಸೀರೆ ಒಗೆಯಲಿಕ್ಕೇ! ಕತ್ತಿ ಮತ್ತು ಕತ್ತರಿಗಳು ಬೇಕೋ, ಎನ್ನುವದಕ್ಕೆ ಕತ್ತೆ ಮತ್ತು ಕತ್ತೆಮರಿಗಳು ಬೇಕೋ ಎಂದೊಂದು ಜಾಹೀರಾತು.

"ಅರಸನ ಕುವರಿಯ ಕೈ ಹಿಡಿದವನೇ ಧನ್ಯ" ವೆಂಬೊಂದು ವಾಕ್ಯವು "ಅಗಸನ ಕುದುರೆಯ ಕೈ ಹಿಡಿದವನೇ ಧನ್ಯ"ನೆಂದು ಆಯಿತು. ಸನಾತನ ಧರ್ಮವಂತೂ ಸಂತಾನ ಧರ್ಮವೆಂದೇ ಆಗಿಬಿಟ್ಟಿತು. "ಪೋಲಿ ಅಧಿಕಾರಿಗೂ, ಹಿಂದೀ ಕಾಮಿಗಳಿಗೂ ಯುದ್ಧ" ನೆಂದಿದ್ದರೆ ಅದನ್ನು ಪೋಲೀಸ ಅಧಿಕಾರಿಯೇ ಇರಬೇಕೆಂದು ಊಹಿಸಿದೆ. ಅದು ತಪ್ಪು, "ಕೂಲಿ ಅಧಿಕಾರಿ" ಎಂದಿರಬೇಕೆಂದು ನನ್ನ ಗೆಳೆಯರೊಬ್ಬರು ನನ್ನೊಡನೆ ಯುದ್ಧ ಹೂಡಿದರು. "ಬಾವನೊಟ್ಟಿಗೆ ಅಕ್ಕ ಬರುವಾಗ ನನಗೆ ಮಾವಿನ ಹಣ್ಣನ್ನು ತರುವಳು" ಎಂದಿದ್ದ ವಾಕ್ಯಕ್ಕೆ ರೂಪಭೇದ ರೋಗ ಬಂದು "ಬಾವಗನೊಟ್ಟಿಗೆ ಅಕ್ಕ ಬರುವಾಗ ನನಗೆ ಮಾವನ ಹೆಣ್ಣನ್ನು ತರುವಳು" ಎಂದಾಗಿದ್ದಿತು. "ಕೂಲಿಕಾರರ ಬೇಡಿಕೆಗಳನ್ನು ಮಾನ್ಯ ಮಾಡಿರಿ" ಎಂಬ ದೊಡ್ಡಕ್ಷರದ ತಲೆ ಬರಹವು "ಕೂಲಿಕಾರರ ಬೇಡಿಗಳನ್ನು ಮಾನ್ಯಮಾಡಿರಿ" ಎಂದು ಕೂಗುತ್ತಿತ್ತು.

"ಮಾನವನ ಹಕ್ಕು ಓಟು ಹಾಕುವದು, ಎಂದು ಆಳುವ ಅರಸರು ಕಡೆಗೆ ನುಡಿದರು" ಎಂಬ ನಾನೇ ಕಳಿಸಿದ ವಾರ್ತೆಯು "ಮಾವನ ಬೆಕ್ಕು ಕೋಟು ಹಾಕುವದು" ಎಂದು ಬಂದುದನ್ನು ನೋಡಿದಮೇಲೆ ನನ್ನ ತಲೆಯಲ್ಲಿದ್ದ ಅನುಮಾನವು ಪೂರ್ತಿ ಬಲವಾಯಿತು. ಬ್ರಹ್ಮನು ಬರೆದ ನನ್ನ ಹಣೆಬರಹದಲ್ಲಿಯೂ ಅದೇ ರೀತಿ ಏನಾದರೂ ಅಚ್ಚಿನ ತಪ್ಪು ಇರಬೇಕೆಂದು. 'ಇಪ್ಪತ್ತ'ನೆಯ ವಯಸ್ಸಿನಲ್ಲಿ ನನಗೆ ಆಗಬೇಕಿದ್ದ ಅನಿರೀಕ್ಷಿತ ಧನಲಾಭವು 'ಎಪ್ಪತ್ತ'ರ ವರೆಗೂ ಎಳೆದಂತಿದೆ. ಆಯುಸ್ಸು ಮಾತ್ರ ಸರಿಯಾಗಿ 'ಐವತ್ತು' ಎಂದೇ ಇದೆ-



## ಸ. ಅ

“ಸ. ಅ” ಎಂಬ ಸಂಕೇತಾಕ್ಷರಗಳು “ಸಂಕೇತಾಕ್ಷರಗಳು” ಎಂಬ ತಲೆಬರಹದ ಸಂಕೇತಾಕ್ಷರಗಳು ಎಂದು ಬೇರೆ ಹೇಳಲೇ ಬೇಕು. ಜಗತ್ತಿನ ಇಂದಿನ ಓಟದ ವೇಗವನ್ನು ನೋಡಿದರಂತೂ ಮುಂದಿನ ವೇಳೆಯ ಯುಗದಲ್ಲಿ ಬರೀ ಸಂಕೇತಾಕ್ಷರಗಳು ಮಾತ್ರವೇ ಬಳಿಕೆಯಲ್ಲಿ ಉಳಿದು ಮೂಲಶಬ್ದಗಳು ಮಾಯವಾದರೆ ಏನೂ ಆಶ್ಚರ್ಯವಿಲ್ಲ. ವೇಳೆಯ ಬೆಲೆ ಅಳತೆ ಮೀರಿದೆ. ವೇಳೆ ನಿಯಂತ್ರಣಾತೀತ.

ಭಾರತ ಒಕ್ಕೂಟದ ಮೊದಲನೆ ಹಿಂದೀ ಗವರ್ನರ ಜನರಲ್ಲರಾದ ಹಿಸ್ ಎಕ್ಸೆಲೆನ್ಸಿ ಶ್ರೀ ಚಕ್ರವರ್ತಿ ರಾಜಗೋಪಾಲಾಚಾರ್ಯರು ಎಲ್ಲರ ಬಾಯಲ್ಲಿಯೂ ‘ಸಿ. ಆರ್’ ಮಾತ್ರ ಅಲ್ಲವೇ? ಹಿಂದಿನಿಂದಿರುವ ಕಾಗದದ ಕೊರತೆ, ಬಂದಿರುವ ಅಚ್ಚಿನ ಮೊಳೆಗಳ ಅಭಾವ, ಇಂದಿರುವ ವಾರ್ತೆಗಳ ಒತ್ತಡ, ಮುಖ್ಯವಾಗಿ ಬರೆದವರಗಿಂತಲೂ ಓದುಗರಿಗೆ–ತತ್ರಾಪಿ ಬೇರೆಯವರ ಪತ್ರಿಕೆಯನ್ನು-ಇರುವ ಸಮಯದ ಅಡಿಚಣೆ, ಮುಂತಾದ ಕಾರಣಗಳಿಂದಲೂ ಸಂಕೇತಾಕ್ಷರಗಳ ಭವಿತವ್ಯವು ಹೆಮ್ಮೆಪಡುವಂತಹದಿದೆ ಎಂದು ಊಹಿಸಲು ಏನೂ ಅಡ್ಡಿಯಿಲ್ಲ. ಕೊಂಚ ಹೊತ್ತು ವೆಲ್ಸನ “ಟೈಮ ಮಶೀನ” ದಲ್ಲಿ ಕುಳಿತು ಮುಂದಿನ ಶತಮಾನಕ್ಕೆ

ಪ್ರಯಾಣಬೆಳೆಸಿ ಆ ಕಾಲದ ವಾರ್ತಾ ಪತ್ರಿಕೆಯನ್ನು ಓದಿದರೆ ಇಂದಿನ ನಮಗೆ ಬಹು ತೊಡಕೆನಿಸಹುದೇನೋ ?

“ಅಭಾವಿಸಂಕಾಕರು ಹೈಸಮಾಪೋಡೈಜರಾಗಿದ್ದ ಕೀಕೇರಾವರ ಪ್ರಕಟಣೆಯನ್ನು ಖಂಡಿಸಿ ತಾಕಾಕಗಳು, ಪ್ರಾಕಾಸಗಳು ಮೈಕಾವ ಕಮೀಟಿ ಹೈಸಂಕಾಕಾಮಂಡಳಿ ಅಭಾವಸಂಗಳೊಂದಿಗೆ ಅಭಾಕಾ ಕಮೀಟಿಯ ಲಕ್ಷ್ಯಕ್ಕೆ ಇದನ್ನು ತರದಿದ್ದಲ್ಲಿ ತಾವೇ ( ಅಭಾವಿಸಂಕಾಕರೇ ) ಬಪ್ರಾರಾಟ್ರೀಯೂದ ವತಿಯಿಂದ ಚರ್ಯೆ ತೆಗೆದುಕೊಳ್ಳುತ್ತೇವೆಂದು ನಿರ್ಧರಿಸಿ ಅಂಜುವ ಸಂಸ್ಥೆಗಳೆಲ್ಲವೂ ಅಭಾವುಪಸದಸ್ಯರಾಗತಕ್ಕದೆಂದು ಮೂದಲಿಸಿದ್ದು ಸರಿಯಲ್ಲವೆಂದು ಕೇವೈಯಮ್ಮ ಮಂದಿರದಲ್ಲಿ ಸೇರಿದ ಕವಿಕಾಸವು ಅಭಿಪ್ರಾಯವ್ಯಕ್ತಮಾಡಿತು. ಹು ಆಸಕಸೆಕೊಬ್ಯಾ ಕಾಕಾ ಮಂಡಳಿ ವಿಸ್ಕೂಬೋ ಅಕಏಮುಸ ಮತ್ತು ಹಿಮುಸ ಹಸಂಪ್ರಾಗಂಪು ಶಾಲೆಯಲ್ಲಿ ಸಭೆಸೇರಿಸಿ ಅಭಿಪ್ರಾಯಕ್ಕೆ ಬೆಂಬಲಕೊಟ್ಟಿವೆ.

ಅಕಏಮುಸ ಕೋಕೊಯೋ ಬಗ್ಗೆ ಹೇಳಿಕೆ ಹೊರಡಿಸಲಿವೆ.

ಅಭಾಪಸಸದಲ್ಲಿ ಫಕ ಮತ್ತು ಆರಾರ್ಡಿಸ್ಕೀಗಳ ಬಗ್ಗೆ ಚರ್ಚೆಯಾಗಬಹುದು. (ಅ. ಪ್ರೆ.)

ಎಂದು ಮುಂಬರುವ ಸಂಕೇತಾಕ್ಷರಗಳ ಭಾಷೆಯಲ್ಲಿ ಬರೆಯಲು ಬರುವದನ್ನು ಇಂದು ನಾವು ಇಂತು ಬರೆಯುತ್ತಲಿದ್ದೇವೆ.

“ಅಖಿಲ ಭಾರತ ವಿದಾರ್ಥಿ ಸಂಘದ ಕಾರ್ಯಕರ್ತರು ಹೈದರಾಬಾದ ಸಂಸ್ಥಾನದ ಮಾಜಿ ಪೋಲೀಸ ಡೈರೆಕ್ಟರ ಜನರಲ್ಲರಾಗಿದ್ದ ಕಾರ್ಟಗಿ ಭೀಮರಾವ ಕಿಶನ್‌ರಾವರ ಪ್ರಕಟನೆಯನ್ನು ಖಂಡಿಸಿ, ತಾಲೂಕ ಕಾಂಗ್ರೆಸ್ ಕಮಿಟಿಗಳು, ಪ್ರಾಂತಿಕ ಕಾಂಗ್ರೆಸ ಸಮಿತಿಗಳು, ಮೈಸೂರ ಕಾಂಗ್ರೆಸ ವರ್ಕಿಂಗ ಕಮಿಟಿ, ಹೈದರಾಬಾದ ಸಂಸ್ಥಾನದ ಕಾರ್ಯಕಾರೀ ಮಂಡಳಿ, ಅಖಿಲಭಾರತ ವಣಿಕ ಸಂಘಗಳೊಂದಿಗೆ ಅಖಿಲಭಾರತ ಕಾಂಗ್ರೆಸ ಕಮಿಟಿಯ ಲಕ್ಷ್ಯಕ್ಕೆ ಇದನ್ನು ತರದಿದ್ದಲ್ಲಿ, ತಾವೇ ( ಅಖಿಲಭಾರತ ವಿದ್ಯಾರ್ಥಿ

ಸಂಘದ ಕಾರ್ಯ ಕರ್ತರೇ ) ಬಂಗಾಲ ಪ್ರಾಂತಿಕ ರಾಷ್ಟ್ರೀಯ ಯೂನಿಯನ್ನದ ಪತಿಯಿಂದ ಚರ್ಯೆ ತೆಗೆದುಕೊಳ್ಳುತ್ತೇವೆಂದು ನಿರ್ಧರಿಸಿ, ಅಂಜುವ ಸಂಸ್ಥೆಗಳೆಲ್ಲವೂ ಅಖಿಲಭಾರತ ಮಹಿಳಾ ಪರಿಷತ್ತಿನ ಸದಸ್ಯರಾಗತಕ್ಕದೆಂದು ಮೂದಲಿಸಿದ್ದು ಸರಿಯಲ್ಲವೆಂದು, ಕರ್ನಾಟಕ ಯಂಗ್ ಮೆನ್ಸ್ ಅಸೋಶಿಯೇಶನ್ನದ ಮಂದಿರದಲ್ಲಿ ಸೇರಿದ ಕರ್ನಾಟಕ ವಿಧಾಯಕ ಕಾರ್ಯಕರ್ತರ ಸಮ್ಮೇಲನವು ಅಭಿಪ್ರಾಯ ವ್ಯಕ್ತಮಾಡಿತು. ಹುಬ್ಬಳ್ಳಿ ಆರ್ಟ್ ಸರ್ಕಲ್, ಕರ್ನಾಟಕ ಸೆಂಟ್ರಲ್ ಕೋ–ಆಪರೇಟಿವ್ ಬ್ಯಾಂಕಿನ ಕಾರ್ಯಕಾರೀ ಮಂಡಳಿ, ವಿಜಾಪೂರ ಸ್ಕೂಲ ಬೋರ್ಡು, ಅಖಿಲ ಕರ್ನಾಟಕ ಏಕೀಕರಣ ಮಹಾ ಸಮಿತಿ, ಮತ್ತು ಹಿಂದೂ ಮಹಾ ಸಭೆ, ಹದಿನಾರನೇ ನಂಬರ ಪ್ರಾಥಮಿಕ ಗಂಡು ಮಕ್ಕಳ ಶಾಲೆಯಲ್ಲಿ ಸಭೆ ಸೇರಿಸಿ ಈ ಅಭಿಪ್ರಾಯಕ್ಕೆ ಬೆಂಬಲ ಕೊಟ್ಟಿವೆ.

ಅಖಿಲ ಕರ್ನಾಟಕ ಏಕೀಕರಣ ಮಹಾ ಸಮಿತಿಯು ಕೋಯಿನ ಕೊಳ್ಳದ ಯೋಜನೆಯ ಬಗ್ಗೆ ಹೇಳಿಕೆ ಹೊರಡಿಸಲಿದೆ.

ಅಖಿಲ ಭಾರತ ಪತ್ರಿಕಾ ಸಂಪಾದಕರ ಸಮ್ಮೇಳದಲ್ಲಿ ಘಟನಾ ಕರಡು ಮತ್ತು ರೂರಲ್ ರಿಕ್ರಿಯೇಷನ್ ಡೆವಲಪ್ಮೆಂಟ ಸ್ಕೀಮುಗಳ ಬಗ್ಗೆ ಚರ್ಚೆಯಾಗಬಹುದು. ಅಸೋಸಿಯೇಟೆಡ್ ಪ್ರೆಸ್ ”

ಹೆಸರಿನ ಮುಂದೆ ‘ ಬಿ. ಎ. ’ ‘ ಎಂ. ಎ. ’ ಎಂದು ಪದವೀಧರರು ಸೇರಿಸಿದಂತೆ ಗೆಳೆಯರೊಬ್ಬರು ನೌಕರಿ ಬೇಡಿಕೆಯ ಅರ್ಜಿಯಲ್ಲಿ ತಮ ಹೆಸರಿನ ಕೊನೆಯಲ್ಲಿ “ ನಾ. ಮ. ತ. ” ಎಂದು “ ಸ. ಅ. ” ಸೇರಿಸುತ್ತಿದ್ದರು. ಅವರು “ ಒಂ. ಮ. ತ. ” ಆದ ಮೇಲೆ ತಿಳಿಯಿತು ಅದರರ್ಥ—‘ ಒಂಬತ್ತು ಮಕ್ಕಳ ತಂದೆ ’ ಎಂಬುದು ಎಂದು. ಹೈದರಾಬಾದಿನ ನಿಜಾಮರ ಹೆಸರಿಗೂ ಸೇರಿಸಬಹುದಲ್ಲ “ ನೂ. ಹೆಂ. ಗಂ. ” ( ನೂರು ಹೆಂಡಿರ ಗಂಡ ! ಎಂದು ).

ಜಾತ್ಯಾತೀತ ರಾಷ್ಟ್ರದಲ್ಲಿ ಜಾತಿ ಕೇಳಲು ಅಂಜಿ ಸೂಕ್ಷ್ಮವಾಗಿ

## ಹುಚ್ಚು—ಹುರುಳು

ಸಂಕೇತಾಕ್ಷರಗಳಲ್ಲಿ 'ಎನ್ಬಿ' ಎಂದು ಹೇಳಿದವನನ್ನು 'ನಾನ್ ಬ್ರಾಹ್ಮಿನ್' ಎಂದು ತಿಳಿದು ನೌಕರಿ ಕೊಟ್ಟ್ ತಿಂಗಳ ಮೇಲೆ ತಿಳಿಯಿತಂತೆ ಅವನು 'ನಿಯೋಗಿ ಬ್ರಾಹ್ಮಿನ್' ಎಂದು. ಸಂಕೇತಾಕ್ಷರಗಳು ಹೆಸರುಗಳಿಗಂತೂ ಬಹು ಸ್ವಾರಸ್ಯವಾಗಿ ಉಪಯೋಗವಾಗಿವೆ. ಈ ಚಿಕ್ಕ ಸಂಭಾಷಣೆಯೇ ಉದಾಹರಣೆ.

ಹೊರ ಬಾಗಿಲಲ್ಲಿ ಒಬ್ಬ :— ಟೀಕೇ. ಟೀಕೇ.

ಒಳಗಿದ್ದೊಬ್ಬ :— ಟಿ-ಕೇ ಇಲ್ರೀ. ನಾನು ಎಸ್ಕೇ, ಯಾರು ಬಂದಿದ್ರು ಅಂತ ಹೇಳ್ಬೇಕೂ ?

ಹೊರಬಾಗಿಲಲ್ಲಿ :— ಏಕೇ ಮತ್ತು ಕೇ ಕೇ ಬಂದೀವಪಾ ಎಸ್ಕೇ. ಟೀಕೇ ಎಲ್ಲಿ ಆರ್ಕೇನ ಮನಿಗೆ ಹೋದನೇನು ?

ಎಸ್ಕೇ :— ಹ್ಯಾಂಗ ಹೇಳಬೇಕ್ರೀ ಏಕೇ ಕೇಕೆಯವರೇ ? ಬೀಕೇ ಎಮಿಕೇ ಬಂದಿದ್ರು. ಮೂವರೂ ಸೇರಿ ಎಲ್ಕೇನ್ನೂ ಕರೆದುಕೊಂಡು ಎನ್ಕೇನ ಕಡೆ ಹೋಗ್ತಿವಿ ಅಂದ್ರು.

ಕೇಕೇ :— ಆತು, ಏಕೇ ಬಂದಿದ್ರು ಎಂದು ಟೀಕೇಗೆ ಇಷ್ಟು ತಿಳಿಸಪಾ ಎಸ್ಕೇ. ಬಾಗಿಲಾ ಹಾಕಿಕೋ ಜೋಕೇ.

ಸೂಚನೆ :— ಮೇಲಿನ ಸಂಭಾಷಣೆಯಲ್ಲಿ ಬಂದಿರುವ ಪೂರ್ಣ ಹೆಸರುಗಳು :—

೧ ತಿಮ್ಮಣ್ಣ ಕೈಲಾಗದ್ ೨ ಸಿವಪ್ಪ ಕಡ್ಲಿಕರ್ ೩ ಅಬ್ದೂಲ ಕರೀಮ್ ೪ ಕೈವಾರಂ ಕೃಷ್ಣಮೂರ್ತಿ ೫ ರಾಮಪುರ ಕೇಶವಾಚಾರಿ ೬ ಭೀಮಪ್ಪ ಕುರದವಾಡಿ ೭ ಮೋಹನ ಕುಮಾರಿ ೮ ಲಕ್ಷ್ಮಣರಾವ ಕುಲಕರ್ಣಿ ೯ ನಾಥೂರಾಮ್ ಖೂನಿ.



# ಸೇವೆ

ಹೊಸದಾಗಿ ಹುಟ್ಟಿದರೂ ಅತಿ ವೇಗದಿಂದ ವ್ಯಾಪಿಸಿರುವ ಲೋಕ ಪ್ರಿಯ ರೋಗಗಳಲ್ಲಿ ಶ್ರೇಷ್ಠವಾದ ರೋಗವು ಸೇವೆ. ಸೇವೆ ಮಾಡದಿರುವ ಮನುಷ್ಯನನ್ನು ಹುಡುಕಿ ತೆಗೆಯುವದು ಕಷ್ಟದ ಕೆಲಸ. ಪ್ರತಿಯೊಬ್ಬನು ಸೇವೆಯಲ್ಲಿಯೇ ನಿರತನಾಗಿದ್ದಾನೆ, ಈ ಸೇವಾ ಯುಗದಲ್ಲಿ! ಜನರಲ್ಲಿ ಸೇವಾ ಬುದ್ಧಿಯು ಬಹುಮುಖವಾಗಿ ಬೆಳೆದು ಇಷ್ಟು ಜನರ ಸೇವೆಯನ್ನು ಸ್ವೀಕರಿಸಲು ಸಮಾಜವೇ ಕಿರಿದಾಗಿದೆ.

ಸೇವೆ ಪಡೆಯುತ್ತಿರುವ ಕ್ಷೇತ್ರಗಳಲ್ಲಿ ಹಲವನ್ನಾದರೂ ಹೊಕ್ಕು ನೋಡುವಾ.

ನಮ್ಮ ಸಂಗೀತ ಮಾಸ್ತರರಿಗೆ ಕಲಾಸೇವೆ ಮಾಡುತ್ತೇವೆಂದು ಸಹಜವಾಗಿ ಹೆಮ್ಮೆ. ಸರಸ್ವತಿಯ ವೈರಿಯಾದ ಸೇಟ್ಜಿರ ಮಗಳಿಗೆ ರೂ. ೨೫ ಸಂಬಳದಮೇಲೆ ಮದುವೆಯಾಗುವ ಒಳಗಾಗಿ ಲಂಬೋಧರ ಕಲಿಸುವ ಕಂಟ್ರಾಕ್ಟು ಹಿಡಿದಿದ್ದಾರೆ. ಹದಿನೇಳು ಮನೆಗಳಲ್ಲಿ ವಾರಕ್ಕೆರಡು ಬಾರಿ ಕೋಳಿ ಕುಯ್ದಂತೆ ಪಿಟೀಲು ಕೊರ್ರೆನಿಸಿ, ಮನೆಗೆ ಇಪ್ಪತ್ತರಂತೆ ವಸೂಲ ಮಾಡಿ ತ್ಯಾಗರಾಜನ ಹೆಸರಿನಲ್ಲಿ ಭೂಮಿಯಲ್ಲಿಯೇ ಮೋಕ್ಷವನ್ನು ಕೊಡುತ್ತಾರೆ. "ನಿಮ್ಮ ಮಗಳಿಗೆ ಸಂಗೀತ ಬಾರದು. ಪಾಠ

ನಿಲ್ಲಿಸಿ ಬಿಡಿ" ಎಂದೆಂದಾದರೂ ಅಂದಾರೆಯೇ ? "ಕೋಗಿಲೆಯುವನ್ತಾ ನಿವ್ಮ್ಮ ಮಗಳು" ಎಂದು ಇದ್ದುದನ್ನು ಇದ್ದಂತೆ ಹೇಳಿ ಕನ್ಯೆಯ ತಾಯಿಗೆ ಹುಚ್ಚೇ ಹಿಡಿಸುತ್ತಾರೆ. ರಾಗದಲ್ಲಿ ಅಲ್ಲ, ರೂಪದಲ್ಲಿ ಎಂದು ಹೇಳಿ ತಮ್ಮ ಬಾಯಲ್ಲಿಯೇ ಮಂಣ್ಣೆರಚಿಗೊಳ್ಳಲು ಅವರಿಗೇನು ಮತಿ ಭ್ರಮೆಯೇ ಪಾಪ! ಎಲ್ಲರೊಡನೆ ಕೊಂಚ ಕೊಂಚ ಹಾಡಿ ಗಂಟಲೊಣಗಿಸಿಕೊಂಡು, ತಂದೆತಾಯ್ಗಳ ಕಿವಿಗಾಗಿ ತಾಳಹಾಕಿಕೊಂಡು ತೊಡೆ ಕೆಂಪೇರಿಸಿಕೊಂಡು ಜರದ ಪಂಜೆಯ ಮಟ್ಟಕ್ಕೆ ಜೀವವನ್ನು ಗಿಟ್ಟಿಸಿ ಸಂಗೀತ ಕಲೆಯ ಸೇವೆ ಯಲ್ಲಿಯೇ ಜೀವನವನ್ನು ಕಳೆಯುವರು. ಇವರ ನಿಸ್ವಾರ್ಥ ಸೇವೆಯ ಫಲವಾಗಿ ಇವರು ನಿರ್ಮಿಸುವ ಆ ಸರಸ್ವತಿ ಮರಿಗಳನ್ನು ಮದುವೆಯಾ ಗುವ ದುರ್ದೈವಿಗಳ ಶಾಪವು ತಟ್ಟದೇ ಈ ಮಾಸ್ತರರಿಗೆ ?

ನೃತ್ಯಕಲಾ ಸೇವೆಯ ಬಗ್ಗೆಯಂತೂ ಏನು ಹೇಳದಿದ್ದರೂ ಬಹು ಹೇಳಿದಂತೆಯೇ! ಮೊನ್ನೆ ಬಂದಿದ್ದ ಹಿಂದೀ ಚಿತ್ರದ ಜಾಹೀರಾತೊಂದು ಮನಮೆಚ್ಚುವಂತಿದ್ದಿತು. ಉತ್ತಮ ಚಿತ್ರ—ನೃತ್ಯವು ಒಂದೂ ಇಲ್ಲ ಎಂಬೆಂಬ ಒಂದೇ ಜಾಣ ವಾಕ್ಯದಿಂದ ಹಣ ಸುರಿಮಳೆಯಾಯಿತು. ಪ್ರೇಕ್ಷಕರೂ ಸುರಕ್ಷಿತ ತಂತಮ್ಮ ಮನೆ ಸೇರಿಕೊಂಡರು. ಬಣ್ಣಪುಚ್ಚಗಳ ಸಂತೆ ನೆರೆಸಿ, ಮೂಲೆ ಮೂಲೆಗಳಿಂದ ಬೆಳಕುಚಲ್ಲಿ ಹುಡಿಗೆಯರ ಗುಂಪು ಕಟ್ಟಿ, ಗೆಜ್ಜೆಕಟ್ಟಿ ಜಾತ್ರೆ ಎತ್ತಿನಂತೆ ಝುಲ್ ಝುಲ್ ಎಂದು ಜಿಗಿದಾ ಡಿಸಿ ಹಣ ಗಳಿಸುವ "ಡಾನ್ಸ ಮರ್ಚೆಂಟು"ಗಳು ಮಾಡುವುದೂ ಕಲಾ ಸೇವೆಯೇ. ಪ್ರವಾಸದಲ್ಲಿ ಟಿಕೀಟಿನ ಹಣಕ್ಕೆ ಅಡಚಣೆಯಾದಾಗ ಒಬ್ಬೊಬ್ಬಳನ್ನು ಒಂದೊಂದೂರಲ್ಲಿ ಬಿಟ್ಟಾದರೂ ತಾವು ಮಾತ್ರ ತಮ್ಮೂರು ಮುಟ್ಟಿಕೊಂಡರೆ ಆ ಕಲಾಕೋವಿದರಿಗೆ ಎಲ್ಲರೂ ಧನ್ಯವಾದ ಗಳನ್ನು ಅರ್ಪಿಸತಕ್ಕದ್ದೇ. ಅವರು ಮಾಡಿದುದು ಸೇವೆಯೆಂದಾದಮೇಲೆ ಸ್ವೀಕರಿಸದೆ ಬಿಡಲು ಸಮಾಜಕ್ಕಾದರೂ ಹಕ್ಕೆಲ್ಲಿದೆ ?

ಸಾಹಿತ್ಯ ಸೇವಕರಲ್ಲಿಯಂತೂ ವೈವಿಧ್ಯತೆಗೇನೂ ಅಡಚಣೆಯಿಲ್ಲ.

ಎರಡು ಸಿನೇಮಾ (ಅವರಲ್ಲೊಂದು ಮ್ಯಾಟನಿ) ಒಂದು ಸರ್ಕಸ್ ನೋಡಿ ಸರಕಾರಿ ಕಚೇರಿಯ ಕಾಗದದಲ್ಲಿ ಕತೆ ಬರೆಯುವದೂ ಸಾಹಿತ್ಯ ಸೇವೆಯೇ-ಏಳೋ ಅಥವಾ ಹನ್ನೆರಡೋ ಅಕ್ಷರಗಳಿಗೆ ಒಂದು ತುಂಡಿ ನಂತೆ ಕತ್ತರಿಸಿ ಹೊಸೆದು ಪದ್ಯ ಮಾಡಿದರೆ ಅದೂ ಸಾಹಿತ್ಯಸೇವೆಯೇ; ತತ್ರಾಪಿ ಕಾವ್ಯ ಸೇವೆ. ಭಾಷಾ ಸೇವೆ ಹಲವರಿಗೆ ಆಟವೆನಿಸಿದರೆ ಇನ್ನೂ ಕೆಲವರಿಗೆ ಚಟವಾಗಿದೆ. ಊಟವಿಲ್ಲದಿದ್ದರೂ ಕೆಲವರಿಗಂತೂ ಅದರಿಂದಲೇ ಊಟ. ಪಾಮರ ಜನರಿಗೆ ತ್ಯಾಗವನ್ನು ಬೋಧಿಸಿ ತ್ಯಾಗದ ಪುಣ್ಯವನ್ನು ಅವರಿಗೆ ಸಲ್ಲಿಸಿ, ಅದರ ಫಲವನ್ನು ತಾವು ಪಡೆದರಲ್ಲವೆ ಸೇವೆ ಪೂರ್ತಿ ಯಾಗುವದು ?

ಇನ್ನು ಗ್ರಂಥಕರ್ತರಲ್ಲೆರಡು ಜಾತಿ. ಯಾರಿಗೂ ತಿಳಿಯದಂತೆ ಬರೆಯಬೇಕೆಂಬ ಹಿರಿ ಹಂಬಲದವರದೊಂದು; ತಮಗನಿಸಿದ್ದನ್ನು ಬರೆ ಯುವ ಭರಾಟೆಯಲ್ಲಿ ತಮ್ಮ ಬಗ್ಗೆ ಇತರರಿಗೇನು ಎನಿಸುತ್ತದೆಂಬುದನ್ನು ಮರೆಯುವದಿನ್ನೊಂದು. ಆಶೀರ್ವಾದ ಕೇಳಿದೊಡನೆಯೇ ಮುನ್ನುಡಿ ಬರೆದುಕೊಡುವ ಹಿರಿಯರಿದ್ದಾಗ, ಮುನ್ನುಡಿ ಕೊಟ್ಟೊಡನೆಯೇ ಕಾದಂಬರಿ ಬರೆಯುವ ಕಿರಿಯರದೇನು ತಪ್ಪು? ನಾಲ್ಕಾರು ಪತ್ರಿಕೆಗಳಲ್ಲಿ ಹೆಸರು ಅಚ್ಚಾದರಂತೂ ಉತ್ತಮ ಬರೆಹಗಾರರ ವರ್ಗಕ್ಕೆ ಸೇರಿಕೊಂಡು ಲೇಖಗಳನ್ನು ಲಿಲಾವು ಹಾಕುವದೂ ಸಾಹಿತ್ಯ ಸೇವೆಯೇ !

ಪುಸ್ತಕ ವ್ಯಾಪಾರಿಗಳಾಗದಿದ್ದರೂ ಸಾಹಿತ್ಯ ವ್ಯಾಪಾರಿಗಳಾಗಿ ಮಾ ತೆಯ (ಉದಾಹರಣೆ-ಭಾಷಾಮಾತೆ, ದೇಶಮಾತೆ ಇತ್ಯಾದಿ ಇತ್ಯಾದಿ) ಸೇವೆ ಗೈಯುವ ಸಂಪಾದಕರದೊಂದು ಬಣ. ಒಬ್ಬರ ಕತೆ, ಇಬ್ಬರ ಕವನ, ಇನ್ನೊಬ್ಬರದೇನಾದರೊಂದನ್ನು ಜಾಹೀರಾತುಗಳೊಟ್ಟಿಗೆ ನೆಯ್ದು, ಬರೆಹಗಾರರ ಬಾಯಿಗೆ ಮಣ್ಣೆರಚಿ, ಕಾಳಸಂತೆಯಲ್ಲಿ ಕೊಂಡ ಕಾಗದ ದಲ್ಲಿ ಬಾಪೂಜಿಯ ಕತೆಗಳನ್ನು ಅಚ್ಚು ಮಾಡಿ ಕನ್ನಡಮ್ಮನ ಸೇವೆಯ ಲ್ಲಿಯೇ ತಮ್ಮ ದೇಹ, ಬರೆದವರ ಬುದ್ಧಿ, ಓದುಗರ ಹಣವನ್ನು ಸವೆ

ಸುವದೂ ಸೇವೆಯೇ. ೧೯೪೭ ಅಗಸ್ಟ ೧೫ ರ ವರೆಗೂ ಪತ್ರಿಕೆಯ ಹಣೆಗೆ "V" ಕಾರ ಹಚ್ಚಿ, ಸೈನ್ಯ ಭರತಿ ಆಫೀಸರರ ಕಾರ್ಯಕ್ರಮು ವನ್ನು ಪ್ರಕಟಿಸಿ, ಜನತಾ ಸೇವೆ ಗೈದು, ಮರುದಿನವೇ "ಜೈ ಹಿಂದ್" ಜಡೆಗು, "ಅಂದಿಗೆ ಅದೇ ಸುಖ, ಇಂದಿಗೆ ಇದೇ ಸುಖ"ವೆಂದು ಜೀವ ಹಿಡಿದು ಪ್ರಜಾ ಸೇವೆ ಗೈದ ಸಂಪಾದಕೋತ್ತಮರೂ ಸಾವಿರಾರು. ದೇಶದಾದ್ಯಂತ ಕ್ರಾಂತಿಯ ಬೇಗೆ ಹಬ್ಬಿ ಜನರು ಕ್ಷೋಭೆಯಲ್ಲಿ ಬಿದ್ದು, ಸರಕಾರಗಳು ಉರುಳಿ, ಮಕ್ಕಳು ಮರಿಗಳು ಗುಂಡಿಗೆ ತುತ್ತಾದಾಗಲೂ ಸಾಹಿತ್ಯ ಮಾತ್ರವೇ ನಮ್ಮ ಕ್ಷೇತ್ರವೆಂದು ಸಾರಿ ಮಹಾಸ್ವಾಮಿಗಳನ್ನೆತ್ತಿ ಕೊಂಡು, ಬೊಂಬೆಯನ್ನಿಟ್ಟುಕೊಂಡು ದಸರಾ ಹಬ್ಬದ ಸಂದಿನಲ್ಲಿ ಸಾಹಿತ್ಯೋತ್ಸವಗಳನ್ನು ಸಾಂಗೋಪಾಂಗವಾಗಿ ಜರುಗಿಸಿದವರ ನಡೆ ಯಿಲ್ಲದ ನುಡಿಯೂ ಅನುಪಮ ಸೇವೆಯೇ!

"ಹಾರ್ಮೋನಿಯಂ ಸ್ವಯಂ ಬೋಧಿನಿ" ಪ್ರಕಟಿಸುವದು ಸಂಗೀತ ಸೇವೆಯಾದರೆ "ಹಿಂದೀ ಸ್ವಯಂ ಬೋಧಿನಿ" ಮಾರುವದೂ ರಾಷ್ಟ್ರ ಭಾಷಾ ಸೇವೆಯೇಕಲ್ಲ? "ಮಾನ್ಯ ಬಾಪೂಜಿಯವರ ಆದರದ ಭಾಷೆ ಯಾದ ಹಿಂದಿಯನ್ನು (ನಮ್ಮ ರಾತ್ರಿಶಾಲೆಯಲ್ಲಿ) ಕಲಿಯಿರಿ. ತಿಂಗಳಿಗೆ ೨೦ ರೂ. ಪ್ರವೇಶ ಧನ; ೩೦ ರೂ. ಪಂಡಿತ ಪರೀಕ್ಷೆ ಪಾಸಾಗಿರಿ" ಎಂದೊಂದು ಜಾಹೀರಾತು. "ಶೀಘ್ರದಲ್ಲಿಯೇ ಪ್ರಧಾನ ಸಚಿವರಾದ ಪಂಡಿತ ನೆಹರೂರವರು ನಮ್ಮೂರಿಗೆ ಬರಲಿರುವರು. ಜಾಗ್ರತೆ ಹಿಂದೀ ಕಲಿತು ಅವರ ಭಾಷಣವನ್ನು ಕೇಳಿರಿ —ಒಂದೇ ನೂರು ರೂಪಾಯಿಯ ಮುಖ ನೋಡಿ ಈ ಸುಸಂಧಿಯನ್ನು ಕಳೆದುಕೊಳ್ಳಬೇಡಿರಿ" ಎಂದೊಂದು ಸಿನೇಮಾ ಸ್ಲೈಡು ರಾಷ್ಟ್ರಭಾಷಾ ಸೇವಕರದು.

ಹೈದರಾಬಾದಿನಲ್ಲಿ ರಜಾಕಾರರ ಹಾವಳಿ ನಡೆದಾಗ ಗಡಿ ಪ್ರಾಂತ ದಲ್ಲಿ ಗೃಹ ರಕ್ಷಣೆ ಮಾಡಿಕೊಂಡಿದ್ದು, ಮಂದಿ ಒಪ್ಪುವ ವೇಷವನ್ನು ಹಾಕಿ ಮನೆ ತುಂಬುವ ವ್ಯವಹಾರ ನಡೆಸಿದ ಸೇವಕರು ಇದ್ದೂರವರಿಗೆ ಉದ್ದರಿ ಕೊಡುವ ದಡ್ಡತನಕ್ಕೆ ಹೋಗದೆ, ರೂಪಾಯಿಗೆ ಹತ್ತು ರೂಪಾಯಿ ಲಾಭ

ದಾಸೆಗೆ ಹೊಳೆಯಾಚೆಗೆ ಪೆಟ್ರೋಲೆಣ್ಣೆ, ಕಾಳುಕಡಿ ಸಾಗಿಸಿದವರಿಂದು ಪ್ರಾಯಶ್ಚಿತ್ತ ರೂಪವಾಗಿ ಲಾಭದಲ್ಲಿ ಮುಕ್ಕಾಲಾಣೆ ಭಾಗ ಗಾಂಧಿ ನಿಧಿಗೆ ಅರ್ಪಿಸಿ, ಜನತಾ ಸೇವೆಯೇ ಜನಾರ್ಧನ ಸೇವೆಯೆಂದು ಜನರ ಮುಂದೆ ನುಡಿಯುವವರ ಸೇವೆ ಮಾತ್ರ ಸಾಮಾನ್ಯವೇ ? ವರ್ಷಕ್ಕೆರಡು ಲಿಮಿಟೆಡ್ ಕಂಪನಿಗಳನ್ನು ತೇಲಿಸಿ, ಅದರಲ್ಲಿ ದುಡಿದವರನ್ನು ಮುಣುಗಿಸಿ, ಸೇರು ಕೊಳ್ಳಲು ಬಂಧು ಬಳಗದವರು ಸಾಕಷ್ಟು ಇಲ್ಲದಾಗ ಸ್ವಜಾತೀಯರಿಗೂ ಸೇರು ಮಾರಿ, ದೇಶದ ಐಶ್ವರ್ಯ ಬೆಳೆಸುವ ದೇಶನಿಷ್ಠರು ಎಷ್ಟೋ ಮಂದಿ. ಅನ್ನದ ಕೊರತೆಯ ಈ ಕಾಲದಲ್ಲಿಯೂ ಸರಕಾರದ ಸಹಾಯ ಪಡೆದು ಸಿಗರೇಟ ಕಾರ್ಖಾನೆಗಳನ್ನು ತೆಗೆದು ಕಾರ್ಮಿಕರಿಗೆ ಮೈತುಂಬ ದುಡಿತ ಕೈತುಂಬ ಅನ್ನ ಕೂಡುವದೇನು ಕಡಿಮೆ ಸೇವೆಯೇ ? ಹೆಚ್ಚೆಚ್ಚು ತೆರಿಗೆಗಳನ್ನು ಈಗಾಗಲೇ ತೆತ್ತು ಪೂರ್ತಿ ಮೆತ್ತಗಾಗಿದ್ದಾರೆಂದು ಸಹಾನುಭೂತಿಪಡೆದ ಉದ್ದಿಮೆ ಸೇವಕರಿವರು. ಭಾಂಡವಲದ ಬಂಗಾರಕ್ಕೆ ಭಂಡತನದ ಕುಂದಣವನ್ನಿಟ್ಟ ಇವರದೂ ಅಗಾಧ ಸೇವೆಯೇ ಇರಬೇಕು.

ಸರಕಾರಿ ನೌಕರರು ಕೇವಲ ಹೊಟ್ಟೆ ಪಾಡಿಗಾಗಿ ದುಡಿಯುತ್ತಾರೆಂದು ಹಲಕೆಲವರಿಗೆ ತಪ್ಪು ಅಭಿಪ್ರಾಯವಿರಬಹುದು. ಅವರ ವೃತ್ತಿಯ ಹೆಸರೇ ಸರಕಾರಿ ಸೇವೆ. ಯಾವ ಸರಕಾರವೇ ಇರಲಿ. ಪ್ರಜಾರಾಜ್ಯ ಬಂದಮೇಲೆ ಕೇಳುವದೇನಿದೆ ? ಪ್ರಜರ ಸೇವೆ ಸರಕಾರ ಮಾಡುವಾಗ, ಸರಕಾರಿ ಸೇವಕರು ಪ್ರಜರಿಗಾಗಿ ಸರಕಾರದ ದ್ವಾರ ಸೇವೆ ಸಲ್ಲಿಸುತ್ತಾರೆ. ಉದ್ಯೋಗದಿಂದ ನಿವೃತ್ತರಾದಮೇಲೆ ಇವರು ವಿರಾಮ ವೇತನ ಪಡೆಯುತ್ತಿರುವದರಿಂದ ಇವರ ಇಡೀ ಜೀವನವೇ ಪ್ರಜಾ ಸೇವೆಯಲ್ಲಿ ಗತಿಸಿತೆಂದು ಇವರ ಹೆಚ್ಚಳ.

ಇನ್ನೊಬ್ಬರಬಗ್ಗೆ ಮಾತ್ರ ಹೇಳುವದು ಬೇಡ. ಆಮೇಲೆ ಯಾರಾದರೂ ಚಾಡಿ ಕೊಟ್ಟರೆ ಕಷ್ಟ. ಅಲ್ಲದೆ ಅವರು ತಮ್ಮ ವರ್ತನೆಯಿಂದ ಸಾರ್ವಜನಿಕರಿಗೆ ಮೇಲ್ಪಂಕ್ತಿಯಾಗಿರಬೇಕಿಲ್ಲವೆಂದು ನಿರ್ಧರಿಸಿಯಾಯಿತಲ್ಲ ?



## ಕತ್ತೆಮರಿ

೧೯೩೧

ಚಿಕ್ಕದಾದರೂ ಮನೆ ಚೊಕ್ಕಟವಾಗಿದೆ. ಮುಂದೊಂದು ಚೆಂದವಾದ ಕೈದೋಟ. ಇಬ್ಬರಿಗಾಗುವಷ್ಟು ಪಲ್ಲೆ, ಒಬ್ಬಳಿಗಾಗಿ ದೇವರಿಗೂ ಉಳಿಯುವಷ್ಟು ಹೂ. ತೋಟಕ್ಕಂತೂ ಯಾರ ಕಾಟವೂ ಇಲ್ಲ. ಹೊರಗಿನ ಮಂಗಮೇಕೆಗಳೂ ಇಲ್ಲ, ಒಳಗಿನ ಮಕ್ಕಳು ಮರಿಗಳೂ ಇಲ್ಲ. ದಾಳಿಂಬೆ ಗಿಡವಂತೂ ಅಕ್ಷಯಪಾತ್ರೆ. ಮನೆಗೆ ತೋಟ ಭೂಷಣ, ತೋಟಕ್ಕೆ ಮನೆ ಭೂಷಣ; ನನಗೆ ನನ್ನ ಇವಳು, ನನ್ನ ಇವಳಿಗೆ ನಾನು ಇದ್ದಂತೆ. ಹೊರಬಾಗಿಲಿಗೊಂದು ಹಲಿಗೆ. ಮುತ್ತಿನಂತಹ ಅಕ್ಷರಗಳು ಅದರ ಮೇಲೆ- 'ನಾಯಿ, ಎಚ್ಚರಿಕೆ' ಎಂದು. ಮನೆಗೆ ಬಂದವರನ್ನು ಅದು ಕಚ್ಚೀತೆಂದಲ್ಲ ನನ್ನ ಭಯ, ಬಾಗಿಲಲ್ಲಿ ಮಲಗಿದುದನ್ನು ಯಾರಾದರೂ ಕಾಣದೆ ಕಾಲಿಕ್ಕಿ ಕೋಂದಾರೆಂದು ಆ ಎಚ್ಚರಿಕೆ. ಒಳ್ಳೆಯ ಬೆಲೆ ಕೊಟ್ಟು ಉದಕಮಂಡಲದಿಂದ ತಂದದ್ದು. ಅದರ ನಿತ್ಯದ ಕರ್ಚಿನಲ್ಲಿ ಎರಡು ಮಧ್ಯಮ ವರ್ಗದ ಕೆಳ ಕಾರಕೂನರನ್ನಾಗಲೀ, ನಾಲ್ಕು ಪ್ರಾಥಮಿಕ ಶಾಲೆಯ ಶಿಕ್ಷಕರನ್ನಾಗಲೀ, ಎಂಟು ವತನದಾರ ಕುಲಕರ್ಣಿಗಳನ್ನಾಗಲೀ ಸಾಕಬಹುದಿತ್ತು. ಅವರಿಗೆಲ್ಲಿದೆ ಅದರ ಪುಣ್ಯ! ನನ್ನ ಮನೆಯಲ್ಲಿ ಮುಂದಿನ

ಕೋಣೆಗೆ 'ಹುಸಿ ನಗು' ಕೋಣೆಯೆಂದು ಕರೆಯುವ ವಾಡಿಕೆ. ಅತಿಥಿಗಳನ್ನು ಕಾಣುವುದು, ಕೈಕುಲುಕುವುದು, ಅಥವಾ ಮುಗಿಯುವುದು (ಲಿಂಗಾನುಸಾರವಾಗಿ), ಕ್ಷೇಮ ಸಮಾಚಾರ ವಿಚಾರಿಸುವುದು, ಬೀಳ್ಕೊಡುವುದು ಎಲ್ಲವೂ ಹುಸಿನಗುವಿನಿಂದಲೇ, ಅದೇ ಕೋಣೆಯಲ್ಲಿಯೇ. ನೆಲದಕಿಂತಲೂ ಕುಳ್ಳಾದ ಕುರ್ಚಿಗಳು ಸುತ್ತಲೂ. ಬುಡದಲ್ಲಿ ಸ್ಪ್ರಿಂಗು, ಬಣ್ಣ ಬಣ್ಣದ ಬಟ್ಟೆಯ ಮೆಲ್ಹೊದಿಕೆ ಅವಕ್ಕೆ. ಮಧ್ಯೆ ಚಿಕ್ಕ ದುಂಡು ಮೇಜು, ಚೌಕ ಹೊದಿಕೆ. ನಗುತ್ತಿರುವ ಸಿನೇಮಾ ನಟಿಯರ ಚಿತ್ರಗಳು ಒಂದು ಗೋಡೆಗೆ. ಅವಕ್ಕೆ ಕೈ ಮುಗಿಯುತ್ತಿರುವ ದೇಶ ಭಕ್ತರ ಚಿತ್ರಗಳು ಎದುರು ಗೋಡೆಗೆ.

ಇಂದಿನಂತೆ ಅಂದು ರೇಷನ್ ರಾಕ್ಷಸನಿಲ್ಲ. ಹೊಟ್ಟೆಯ ಅಳತೆ ನೋಡಿ ಅನ್ನ. ಜಾತಿ ಕೇಳಿ ಸಕ್ಕರೆ, ಆಳಿನ ಸುತ್ತಳತೆ ನೋಡಿ ಬಟ್ಟೆ, ನಂಪಿನ ಸಾಹಸ ನೋಡಿ ಸಂಬಳ, ಮೂಗಿನ ಗಾತ್ರ ನೋಡಿ ನಸ್ಯ, ಶ್ವಾಸಕೋಶದ ಆಳ ನೋಡಿ ಗಾಳಿ ಕೊಡುವ ಸೀದಾ ಪದ್ಧತಿಯೂ ಇಲ್ಲ. ನಡುಮನೆ. ಬಾಗಿಲಿಗೆ ಒಂದೊಂದು ಬಟ್ಟೆ. ಮಹಾತ್ಮಗಾಂಧೀ, ಬುದ್ಧದೇವ, ಅರೆಗಣ್ಣು ಮುಚ್ಚಿ ಕೈಯಲ್ಲಿ ಕಮಲವನ್ನು ಹಿಡಿದ ಅಪ್ಸರೆ, ಮಗುವಿಗೆ ಹಾಲುಣಿಸುವ ಜಿಂಕೆ ಮುಂತಾದ ಚಿತ್ರಗಳು ದ್ವಾರ ವಸ್ತ್ರಗಳ ಮೇಲೆ. ಕಿಟಕಿಗಳಿಗೂ ಒಟ್ಟೆ ಬರೆ. 'ನಗು, ಎಲ್ಲರನ್ನೂ ನಗಿಸು' 'ಅಳು, ಒಬ್ಬನೇ ಅಳು' ಎಂಬ ಗಾದೆ ಮಾತುಗಳು ಇವುಗಳ ಮೇಲೆ. ಮೂಲೆಯಲ್ಲೊಂದು ರೇಡಿಯೋ. ಅದರ ತಲೆಯ ಮೇಲೊಂದು ಬಿಳಿಯ ಆನೆ, ಆನೆಯು ದಂತದಲ್ಲಿಯೇ ಕೆತ್ತಿದಿದು. ಇನ್ನೊಂದು ಮೂಲೆಯಲ್ಲಿ ಚಿಕ್ಕಮೇಜು. ಬಾಯಿತೆರದು—ಅಳಲು ಅಲ್ಲ, ನಗಲು—ಕೈಚಾಚಿ ಕುಳಿತ ಕೂಸು ಅದರ ಮೇಲೆ. ನಿಜವಾದ ಕೂಸು! ಕರ್ಪೂರದ್ದು. ಕುಸ್ತಿಮಾಡಿ ಅದರ ಬೆರಳು ಎಳೆದು, ಕಣ್ಣು ಕಿತ್ತಿ, ಮೂಗು ಮುರಿದು ಮತ್ತೆ ಆಳುವ ಮಕ್ಕಳು ಮನೆಯಲ್ಲಿಲ್ಲ ಸದ್ಯ. ಕರ್ಪೂರದ ಮಗುವಿಗೆ ಆಯಸ್ಸು ಬಹಳ. ಬಹುಕಾಲದಿಂದಲೂ ನಮ್ಮ ಮನೆಯಲ್ಲಿಯೇ

## ಹುಚ್ಚು—ಹುರುಳು

ಬೆಳದಿದೆ-ಅಲ್ಲ ಬದುಕಿದೆ ಈ ಬೊಂಬೆ. ನನ್ನ ತಂದೆ ತಾಯಿಗಳಿಗೆ ಕಡೆಗೂ ಮಕ್ಕಳಾಗಲಿಲ್ಲ! ಬೊಂಬೆ ಸುಖವಾಗಿ ಉಳಿದಿತ್ತು. ದೊಡ್ಡವನಾದ ಮೇಲೆ ನಾನು ದತ್ತು ಬಂದೆ.

ಮಲಗುವ ಕೋಣೆ. ಮಂಚ, ಗಾದಿ ಇತ್ಯಾದಿ ಇತ್ಯಾದಿ. ಒಪ್ಪುವ ಚಿತ್ರಗಳು ಗೋಡೆಗೆ. ಇಂತಹ ಸ್ವರ್ಗದಲ್ಲಿಯೂ ನರಕದ ಪಟವನ್ನು ನೇತಾಡಿಸುವ ಅರಸಿಕತೆಯೇ ನನ್ನಲ್ಲಿ? ಇಬ್ಬರು ಕೂಡಲು ಕೊಂಚ ಕಿರಿದು, ಒಬ್ಬರಿಗೆ ಬಹು ದೊಡ್ಡದು ಎನಿಸುವ ಮೆತ್ತನ ಸೋಫೆ ಒಂದೆಡೆ. ಇಷ್ಟು ಸಾಕು. ಈ ಕೋಣೆಗೆ ಅನ್ಯರ ಪ್ರವೇಶವಿಲ್ಲ. ವರ್ಣನೆ ಮಾತ್ರ ಏಕೆ?

ಓದುವ ಕೋಣೆಯನ್ನು ಅವಳು ಸಿಂಗರಿಸಿದರೆ, ವೀಣೆಯನ್ನು ಶ್ರುತಿಗೆಡಿಸುವುದು ನನ್ನ ಕೆಲಸ. ವೀಣೆ ಕೈಯಲ್ಲಿ ಹಿಡಿದು ಕುಳಿತರೆ ಅವಳು ಸರಸ್ವತಿ; ಬರೆಯಲು ಕುಳಿತರೆ ನಾನು ವಿದ್ಯಾಸಾಗರ. ಒಮ್ಮೊಮ್ಮೆ ಅವಳಿಗೆ ಕವನ ಬರೆಯುವ ಹುಚ್ಚೇಳುತ್ತಿದೆ, ನನ್ನ ಕೈಯಲ್ಲಿ ವೀಣೆ ಅಪಸ್ವರ ನುಡಿದಾಗ. ಆಂಗ್ಲ ಸಾಹಿತಿಗಳು ಕೊಟ್ಟ ಕಾವ್ಯವನ್ನು ಸವಿದಾಗ, ವಿಷಕೊಡುವ ಆಂಗ್ಲ ರಾಜಕಾರಣಿಗಳಿಗೂ ಕ್ಷಮೆ ತೋರುವ ಬುದ್ಧಿಯಾಗದಿರದು; ಆಂಗ್ಲವೆಂದ ಮಾತ್ರಕ್ಕೆ ರೇಗಿಗೇಳುವ ರೋಗಿಗಳ ಗುಂಪಿನವ ನಾನಲ್ಲ. ಷೆಲ್ಲಿ ಕೀಟ್ಸರಿಂದ ಹಿಡಿದು ಬೇಂದ್ರೆ, ಪುಟ್ಟಪ್ಪರವರೆಗೂ, ಷೇಕ್ಸ್‌ಪಿಯರ್‌ನಿಂದ ಹಿಡಿದು ಶೇಷಪ್ಪ ಅಯ್ಯರ್‌ನವರೆಗೂ, ಅಥವಾ ಷೇಕ್‌ಪಿರಾನ ವರೆಗೂ, ಷಾನಿಂದ ಹಿಡಿದು ಶ್ರೀರಂಗರವರೆಗೂ ಎಲ್ಲರೂ ಸಾಲಾಗಿ ಕುಳಿತ್ತಿದ್ದಾರೆ ನನ್ನ ಪುಸ್ತಕ ಸಾಮ್ರಾಜ್ಯದಲ್ಲಿ. ನನ್ನ ಪುಸ್ತಕನಿಧಿ ಬೆಳೆದಂತೆಲ್ಲಾ ಅವಳ ಕೋಣೆಯಲ್ಲಿ ವೀಣೆ, ಪಿಟೀಲು, ಕೊಳಲು, ಮೋರ್‌ಸಿಂಗುಗಳು ಹೆಚ್ಚಾಗುತ್ತಿವೆ.

ಹಸಿಯುವ ಮುನ್ನೆಯೇ ಊಟಸಿದ್ಧ. ಊಟ, ತಿಂಡಿ ಎಲ್ಲವೂ ಮೇಜಿನ ಮೇಲೆ, ಗಾಜಿನ ತಟ್ಟೆಗಳಲ್ಲಿ.

ಅಚ್ಚು ಮೆಚ್ಚಿನ ದಂಪತಿಗಳು ಎಂದು ಹೇಳಿದರಂತೂ ಏನೂ

ಹೇಳಿದಂತಾಗಲಿಲ್ಲ, ಬಹು ಸಪ್ಪೆಯಾಯಿತು; ಅಷ್ಟು ಸಿಹಿ ಇದೆ ಬಾಳು ಎತ್ತ ಸವಿದರೂ ಸಿಹಿಯೇ. ಕಲ್ಲು ಸಕ್ಕರೆ ಒಂದೆಡೆ ಸಿಹಿ ಒಂದೆಡೆ ಕಹಿ ಇರಲಾರದೇತೆ? ದೇವರೇ ಕಡೆಯ ವರೆಗೂ ಇಷ್ಟೇ ನಡೆಸಿಕೊಡು ಎಂಬು ವಷ್ಟು ಹಿತವಾಗಿದೆ ಬಾಳು. ಇನ್ನೂ ಹೆಚ್ಚು ಕೊಡುವುದು ಆತನ ಇಚ್ಛೆ ಇದ್ದರೆ ಇಷ್ಟಕ್ಕೆ ಸಾಕೆನ್ನುವ ದಡ್ಡತನದ ತೃಪ್ತಿ ಏಕೆ ಎಂದೊಂದು ಆಶಾಕಿರಣ. ಎರಡೇ ದಿನಗಳು ಇದ್ದು ಸೆಂದು ಬಂದ ನಮ್ಮ ಬಾವ 'ಬಹು ಮುದ್ದಾಗಿದೆಯೊ, ನಿನ್ನ ಸಂಸಾರ' ಎಂದು ಹೇಳಿ ಎರಡು ವಾರಗಳು ನನ್ನ ಮನೆಯಲ್ಲಿ ಇದ್ದು ಹೋದರು. ಇದೆಲ್ಲವೂ ಇನ್ನೂ ಕಾಲೇಜಿನಲ್ಲಿ ಕಲಿಯುತ್ತಿದ್ದಾಗ, ದತ್ತ ತಂದೆ ಹೊಸದಾಗಿ ಸತ್ತಾಗ.

೧೯೪೧

ದೊಡ್ಡ ಬ್ಯಾಂಕು. ಬಹು ದೊಡ್ಡ ಕಟ್ಟಡದ ಮೂರಂತಸ್ತಿನ ಮೇಲಿದೆ. ಡೈರಕ್ಟರರು ದೊಡ್ಡ ಮನುಷ್ಯರು. ಬ್ಯಾಂಕಿನಲ್ಲಿ ದುಡ್ಡಿಟ್ಟವ ರೆಲ್ಲರೂ ದುಡ್ಡಿದ್ದವರೇ. ಕೆಲವರು ಮಾತ್ರ ಬರೀ ಲೆಕ್ಕವನ್ನಿಟ್ಟಿದ್ದಾರೆ. ಒಟ್ಟಾರೆ ಬ್ಯಾಂಕು ದೊಡ್ಡದು. ಅನೇಕ ಕಾರಕೂನರಿದ್ದಾರೆ; ದೊಡ್ಡ ದೊಡ್ಡ ಓದುಗಳನ್ನು ಓದಿಕೊಂಡವರು. ನಾನೂ ಒಬ್ಬ. ವೇತನದ ಸ್ಕೇಲು ಅತಿದೊಡ್ಡದು. ಈ ತುದಿಯಲ್ಲಿ ನಿಂತರೆ ಆ ತುದಿ ಕಾಣಲು ಸಾಧ್ಯವಿಲ್ಲ. ರೊ. ೩೦–೩/೨/೨೫,೦೦೦. ಸೇರಿದ ಕೂಡಲೇ ೩೦ ರೂಪಾಯಿ ಎಂದು ಯಾರೂ ಅಂಜಬೇಕಿಲ್ಲ. ದುಡಿದಂತೆಲ್ಲ ಬಡತಿ ಇದೇ ಇದೆಯಲ್ಲ? ಎರಡೇ ವರ್ಷಕ್ಕೆ ಮೂರು ರೂಪಾಯಿ ಮೇರೆಗೆ ಮಧ್ಯೆ ಎಲ್ಲಿಯೂ ನಿಲ್ಲದೆ ೨೫,೦೦೦ ರೂಪಾಯಿಗಳವರಿಗೂ ಸರ್‍ರೆಂದು ಏರಬಹುದು. ಸಂಬಳ ಸಾಲದು ಸಂಬಳ ಸಾಲದು ಎಂದೆಲ್ಲರೂ ಅವರಿವರ ಮಾತು ಕೇಳಿ ತಕರಾರು ಹೂಡಿದೆವು. ಸಂಪಿನ ಬೆದರಿಕೆ ಯನ್ನೂ ಹಾಕಿ ಬಿಟ್ಟೆವು. ಬೋರ್ಡಿನ ಕಣ್ಣು ತೆರೆದು ಕೂಡಲೇ ಹಾದಿಗೆ ಬಂದಿತು. ಹಾಗಿದೆ ಸಂಪಿನ ಪ್ರಭಾವ! ತಕ್ಷಣ ಸ್ಕೇಲಿನ ಆ ತುದಿಗೆ

ರೂ. ೫೦೦ ಜಾಸ್ತಿ ಮಾಡಿದರು. ರೂ. ೨೫,೦೦೦ ಇದ್ದುದು ರೂ. ೨೫,೫೦೦ ಆಯಿತು. ಇನ್ನೇನು, ಗೆದ್ದೆವೆಂದು ಸುಮ್ಮನಾದೆವು. ಸಾಯಂಕಾಲ ಚೆಂಡು, ಚಿಣಿಗಳನ್ನು ಆಡಲು ನಾನೇನು ಶಾಲೆಯ ಹುಡುಗನೇ? ನಾನೂ ಮೂರು ಮಕ್ಕಳ ತಂದೆ. ಬ್ಯಾಂಕಿನಲ್ಲಿ ಸೇರಿ ಆರೇಳು ವರ್ಷಗಳೂ ಆಗಿವೆ. ಅಲ್ಲೆ ಇಲ್ಲೆ ಅಲೆಯುವದೇನೆಂದು ಕತ್ತಲಾಗುವವರೆಗೂ ಕಛೇರಿಯಲ್ಲಿ ಕುಳಿತು ಮನೆಗೆ ಬಂದೆ. ಮುಂಚಿತವಾಗಿ ಮನೆಗೆ ಬಂದಾದರೂ ಮಾಡುವುದೇನು? ಹಿರಿಮಗಳ ಪಿಟೀಲು; ಮಧ್ಯೆದವನ ಪಿಂಸೆ, ಮೂರನೇ ಮಗುವಿನ ಅಳು! ಮೇಲೆ ಮನೆಯವಳ ಕಿಟಿ ಕಿಟಿ-ಅದಿಲ್ಲ ಇದಿಲ್ಲವೆಂದು.

ಮನೆಯ ಬಾಗಿಲಲ್ಲಿ ಬರುತ್ತಲೇ 'ಗೌ'ಎಂದು ಹತ್ತಿರವೇ ಬಂದಿತು ಆ ದರಿದ್ರನಾಯಿ. ಅದಕ್ಕೆ ನೂರೆಂಟು ರೋಗ. ಅದರ ಚಿಕಿತ್ಸೆ ಬೇರೆ ಆಗ ಬೇಕಿನ್ನೂ ಈ ಸಂಭ್ರಮಕ್ಕೆ. ಒಂದೇಟು ಕೊಟ್ಟು ಮುಂದೆ ನಡದೆ. ತೋಟ ಎಷ್ಟು ಚನ್ನಾಗಿದ್ದಿತು ಒಮ್ಮೆ! ಯಾರಾದರೂ ನೀರೆರೆದರೇ ತಾನೆ? ಅಲ್ಲದೆ ಈ ರಜಾಕರರಂತಹ ಮಕ್ಕಳ ಕಾಟಕ್ಕೆ ಅದಾವ ಗಿಡ ಬದುಕಲು ಸಾಧ್ಯ? ಹಲ್ಲೆ, ಹೂ, ಬಳ್ಳಿ ಎಲ್ಲವೂ ನಾಶನ. ನಂದನವನದಂತಿದ್ದ ಅಂತಹ ತೋಟ, ಬಿಟ್ಟ ಮನೆಯ ಮುಂದಿನ ತಿಪ್ಪೆಯಂತೆ ಕಾಣಬೇಕೆ? ಗ್ರಹಚಾರ!

ಈ ಮುಂದಿನ ಕೋಣೆಗೆ ಹೆಸರನ್ನಾದರೂ ಬದಲಾಯಿಸಬೇಕು. ಹುಸಿನಗು ಕೋಣೆ ಎಂದು ಇದಕ್ಕೆ ಎಂದರೆ ಯಾರಾದರೂ ಉಸಿರು ಸಿಕ್ಕು ಸಾಯುವಷ್ಟು ನಕ್ಕಾರು ಆಮೇಲೆ. ಆ ಕಸ, ಆ ರಂಘ! ಎರಡನೆಯವನು ಮಾರುದ್ದ ತಂತಿಯನ್ನು ಕೈಯಲ್ಲಿ ಹಿಡಿದೇ ಓಡುತ್ತ ಬಂದ. ಅವನ ಕಾಲೋ, ಅವನ ಮುಖವೋ! ನನ್ನ ಮಗುವೆಂದು ಹೇಳಿಕೊಳ್ಳಲು ನನಗೇ ನಾಚಿಕೆ. 'ಇದೇಕೋ ಕೈಯಲ್ಲಿ, ಕಣ್ಣಿಗೆ ತಾಗೀತು' ಎಂದು ತಲೆಯಮೇಲೆ ಕೈಯಾಡಿದೆ. ಒಂದು ಬಂಡಿ ಮಣ್ಣು ತಲೆಯಲ್ಲಿ!

ಹೊಸ್ತಿಲಲ್ಲಿ ಕಾಲಿಡುತ್ತಲೆ ಹಿರಿ ಮಗಳ ಚಾಡಿ, ಕುರ್ಚಿಯಲ್ಲಿಯ ಸ್ಪ್ರಿಂಗು ತಮ್ಮ ಕಿತ್ತಿದ್ದಾನೆ. ಮೂಲೆಯಲ್ಲಿ ಬಿದ್ದ ಮೂರು ವಾರುದ್ದನ ಸ್ಪ್ರಿಂಗನ್ನು ನೋಡಿದ ಕೂಡಲೇ ಹೊಟ್ಟೆಯಲ್ಲಿಯ ಕರುಳು ಹೊರಬಿದ್ದಂತಾಯಿತು. ಚಿರಂಜೀವನ ಬೆನ್ನಿಗೆ ಎರಡು ಅಪ್ಪಳಿಸಿದೆ. ವ್ಯಾಳ ಸುರುವಾಯಿತು. ಮನೆಯೊಳಗೆ ಕಾಲಿಟ್ಟೆ. ಸಣ್ಣ ಮಗುವನ್ನು ಅವಳು ತಟ್ಟಿದಳು. ಅದು ತನ್ನ ಅಣ್ಣನೊಟ್ಟಿಗೆ ಸ್ವತಿಗೂಡಿಸಿತು. ಜೋಡಿ ವ್ಯಾಳ ಸಾಗಿತು. ಅರ್ಧಗಂಟೆ ಆದಮೇಲೆ ಅವೇ ಸುಮ್ಮನಾದವು ನಿದ್ರೆಬಂದು. ಉಸ್ಸೆಂದು ಉಸಿರೆಳೆದು ಊಟಕ್ಕೆ ಕುಳಿತೆ. ಗಾಜು ಮೇಜು ಎಲ್ಲ ಹಿಂದೆ ಸರಿದಿದ್ದವು ಆಗಲೆ. ಮೇಜಿನ ಮೇಲಿಂದ ಬಿದ್ದು ದೊಡ್ಡವನ ತಲೆಯೊಡೆದಿದ್ದಿತು.. ಗಾಜಿನ ತಟ್ಟೆಗಳಿಗೆ ಚಿಕ್ಕವನು ಮೋಕ್ಷ ಕೊಟ್ಟಿದ್ದ. ಮುರಿಯಲು ಬಾರದ ಮಣೆ, ಹರಿಯುಲು ಬಾರದಷ್ಟು ಹರಿದ ಎಲೆ ಊಟಕ್ಕೆ. ಎರಡು ತುತ್ತು ಹೊಟ್ಟೆ ಸೇರಿತೊ ಇಲ್ಲವೊ ಸುರುವಾಯಿತು ಮಹಾರಾಯಗಿತ್ತಿಯ ಮಂತ್ರಪುಷ್ಪ. ಕಾದಾಡಲು ಏನೂ ಇಲ್ಲದಿದ್ದರೆ ಮಗಳ ಮದುವೆಯ ಮಾತಂತೂ ಇದ್ದೇಇದೆಯಲ್ಲ. "ಮನೆಗೆ ಬಂದವರಿಗೆಲ್ಲ ಉತ್ತರ ಹೇಳಿಯೇ ಬೇಜಾರು ಆಯಿತು. ಇವಳೇನು ನಿಮ್ಮ ತಂಗಿಯೆ ಎಂದು ಕೇಳುತ್ತಾರೆ. ಜನರಲ್ಲಿ ನಾವೂ ನಾಲ್ಕುಕಾಲ ಮಾನಮರ್ಯಾದೆಯಿಂದ ಬಾಳಬೇಕೆಂದು ನಿಮಗಿದ್ದರೆ ತಾನೇ ? ಅವನೇನು ಕುರುಡನೇ, ಕುಂಟನೇ, ನನ್ನ ತಮ್ಮ ........". "ಮುಚ್ಚೇ ಬಾಯಿ" ಎಂದು ಗದರಿಸಿ ಅವಸರದಲ್ಲಿ ನಾಲ್ಕು ದೊಡ್ಡ ತುತ್ತುಗಳಿಂದ ಹೊಟ್ಟೆ ತುಂಬಿಸಿ ಹೊರಬಿದ್ದೆ. "ಅಡಿಕೆ ಇದೆಯೇನೆ" ಎಂದು ಅಟ್ಟಹಾಸದಿಂದ ಕೇಳಿದುದೇ ವ್ಯೆಮೇಲೆ ಬಂದಿತು. "ಮನೆಗೆ ಸಾಮಾನು ತರೋಕೆ ಪುರಸೊತ್ತು ಆದರೆ ತಾನೆ ನಿಮಗೆ. ಅಡಿಕೆ ತಾರದೇ ಆರು ತಿಂಗಳಾಯಿತು, ಇತ್ಯಾದಿ, ಇತ್ಯಾದಿ. ಹನ್ನೆರಡಾಣೆಗೆ ಸೇರು, ಸಣ್ಣ ತೂಕ ತಿಳಿಯಿತೇ" ಎಂದು ಬಜಾರುಜ್ಞಾನವನ್ನು ಪ್ರದರ್ಶಿಸಿ ಸುಮ್ಮನಿರಿಸಲು ನೋಡಿದೆ. "ಮತ್ತೇಕೆ ಕೇಳಿದಿರಿ, ಅಡಿಕೆ ಇದೆಯೇನೆ ಎಂದು" ಹಿಂದೆಯೇ ಬಂದಿತು ತಿರುಪ್ರಶ್ನೆ. ಸೋತೆ

ಎಂದು ತಪ್ಪಿಸಿಕೊಳ್ಳುವದು ಸುಲಭ. ಧ್ವನಿ ಬದಲಿಸಿ "ತಪ್ಪಾಯ್ತು ಕೇಳಿದ್ದು, ಆಯಿತೇ?" ಎಂದು ಮಾತು ಮುಗಿಸಿದೆ. ಅದೆಲ್ಲಿ ಮುಗಿದೀತು? "ತಪ್ಪು ನಿಮ್ಮದಲ್ಲ, ನಿಮ್ಮದೇಕಾದೀತು, ಪಾಪ! ನನ್ನದು. ಸಂಬಳ ಬಂದಕೂಡಲೇ..........."ಸೂರ್ಯ ಚಂದ್ರರಿರುವವರೆಗೂ ಇದ್ದುದೇ ಈ ಗೋಳು. ಒಂದೆರಡು ಕವನವನ್ನಾದರೂ ಓದುತ್ತ ಕುಳಿತು ನಿತ್ಯದ ಈ ತಾಪತ್ರಯಗಳನ್ನು ಕೊಂಚ ಹೊತ್ತಾದರೂ ಮರೆಯೋಣವೆಂದು ಕುರ್ಚಿಯಮೇಲೆ ಒರಗಿದೆ. ಕೂಡಲೇ ನೆನಪಾಯಿತು. ಬೈಸಿಕಲ್ಲಿಗೆ ಇರುವ ಕೈಚೀಲದ ತುಂಬ ಕುಳಿತಿವೆ ಬ್ಯಾಂಕಿನ ಲೆಕ್ಕಪತ್ರಗಳು. ಎರಡು ರಾತ್ರಿಗಳಾದರೂ ಮುಗಿಯುವಂತಿಲ್ಲ. ಕಾಲಾಣೆ ವೆಚ್ಚಮಾಡಲು ಹಿಂದು ಮುಂದು ನೋಡಬೇಕಾದುದು ನನ್ನ ಜಾತಕದಲ್ಲಿದ್ದರೂ, ಇತರರ ಸಹಸ್ರಾರು ರೂಪಾಯಿಗಳ ಲೆಕ್ಕ ಬರೆಯುವುದು ನನ್ನ ಹೊರೆ. ಕವನದ ಪುಸ್ತಕ ಮೂಲೆಗೆ ಹೋಯಿತು. ಮಿಲ್ಟನ್, ಬೇಂದ್ರೆಗಳು ಏನು ಅನ್ನ ಕೊಟ್ಟಾರೆಯೆ? "ಸಂತೆಯ ಚಿಂತ್ಯಾಕ" ಎಂದು ಬೇಂದ್ರೆ ಬರೆದರು. ನಾನೂ ಹಾಡಿದೆ. ಚಿಂತೆ ಮಾತ್ರ ಇಬ್ಬರಿಗೂ ತಪ್ಪಿಲ್ಲ. ಬ್ಯಾಂಕಿನಲ್ಲಿ ಎಂಟೇತಾಸುಗಳು ದುಡಿಯಬೇಕೆಂದು ದುಡಿಸಿಕೊಳ್ಳುವವರ ಹಟ ಬೇರೆ. ಉಳಿದ ಹದಿನಾರುತಾಸು ಮನೆಯಲ್ಲಿಯೇ ದುಡಿಯಬೇಕೆಂದು ಅದರರ್ಥ? ಕುಳಿತು ಬರೆಯಲು ಸರಿಯಾದ ಕುರ್ಚಿಯೇ ಮೇಜೇ; ಎಲ್ಲಿದೆ ಮನೆಯಲ್ಲಿ? ಇಬ್ಬರು ಮಕ್ಕಳ ಏಕಮಾತ್ರ ಹಾಸಿಗೆಯಾದ ಕಂಬಳಿಯಮೇಲೆ ಕುಳಿತು ಮೂಗಿಗೆ ಕನ್ನಡಕವನ್ನು ಏರಿಸಿದೆ. ಬರೀ ಸಂಖ್ಯೆಗಳು! ಅರ್ಧ ಪುಟ ಕೂಡಿದೆ. ಅದೇಕೋ, ದೀಪಕ್ಕೆ ಕಾಂಗ್ರೆಸ್ಸಿನ ಗತಿ ಬಂದಿತು. ಕ್ರಮೇಣ ಪ್ರಕಾಶವು ಕಡಿಮೆಯಾಯಿತು. "ಏನಾಯಿತೇ ಇದಕ್ಕೆ? ಬೆಳಕು ಕಡಿಮೆಯಾಗುತ್ತಿದೆಯಲ್ಲೇ" ಎಂದು ಕುಳಿತಲ್ಲಿಂದಲೇ ಕೂಗಿದೆ. "ಏಕೆ ಕಡಿಮೆಯಾಗುತ್ತೆ ಪ್ರಕಾಶ, ಅದೂ ಗೊತ್ತಿಲ್ಲವೇ? ಎಣ್ಣೆಯಲ್ಲಿ ನೀರು ಬೆರತಿರಬೇಕು" ಎಂದು ಸುಮ್ಮನಾದಳು. ಕಾಂಗ್ರೆಸ್ಸಿನ ಪ್ರಕಾಶವು ಕಡಿಮೆಯಾಗಲಿಕ್ಕೂ ಇದೇ ಕಾರಣವಿರಬಹುದೇ ಎಂದು ಯೋಚಿಸುತ್ತ

ಹಾಗೆಯೇ ಕುಳಿತೆ. ಕಮ್ಯುನಿಸ್ಟನಂತೆ ಎದ್ದೇ ಬಿಟ್ಟ ಎರಡನೆಯವ ಆರ್ಭಟಿಸುತ್ತ. ಬ್ಯಾಂಕಿನ ಕಾಗದಗಳನ್ನು ಕೈಚೀಲಕ್ಕೆ ಕೂಡಲೆ ತುಂಬಿ ಅವನನ್ನು ಸಂತಯಿಸಲು ನೋಡಿದೆ. ಸೊಳ್ಳೆಗಳ ಕಾಟ. ಹೊದಿಸಲು ಏನಿದೆ ಮನೆಯಲ್ಲಿ? ನಿಷ್ಪ್ರಯೋಜನವಾಗಿ ಬಾಗಿಲಿಗೆ ನೇತಾಡುತ್ತಿದ್ದ ಗಾಂಧಿ ಚಿತ್ರದ ಬಟ್ಟೆಯನ್ನೇ ತೆಗೆದು ಹೊದಿಸಿ ಮೆಲ್ಲಗೆ ಕಾಲ್ತೆಗೆದೆ. ಹೊರಗೆ ಹೊರಡಲು ಕತ್ತಲು, ಚಳಿ; ಒಳಗೆ ಇರಲು ಹೆಂಡತಿ, ಮಕ್ಕಳು.

ನಾಲ್ಕುದಿನಗಳ ಕೆಲಸವಿದೆ ಎಂದು ಬಂದಿದ್ದ ನನ್ನ ಬಾವ ಎರಡು ದಿನಗಳಿಗೆ ಸಾಕು ಮಾಡಿಕೊಂಡು ಮೋಟಾರು ಹತ್ತಿದ.

೧೯೫೧

ಅವನು ಮಲಗಿರುವಾಗಲೆ ಎದ್ದು ನಾನು ಬೇಂಕಿಗೆ ಹೋಗುತ್ತೇನೆ, ನಾನು ಊಟಕ್ಕೆ ಬಂದಾಗ ಅವನು ಶಾಲೆಯಲ್ಲಿರುತ್ತಾನೆ. ರಾತ್ರಿ ಹತ್ತಕ್ಕೋ ಹನ್ನೆರಡಕ್ಕೋ ಬಂದಾಗ ಅವನಿಗೆ ನಿದ್ರೆ. ಅಂತೂ ನನ್ನ ಒಂಬತ್ತನೆ ಮಗನು ನನ್ನನ್ನು ಇನ್ನೂ ನೋಡಿಯೇ ಇಲ್ಲ. ನಿನ್ನೆಬಂದ ಕೋಡುಗಳಿಗೆ ಹಿರಿತನ ಬೇಂಕಿನಲ್ಲಿ. ಮಾನ ಮರ್ಯಾದೆ ವಯಸ್ಸಿಗಾದರೂ ಬೇಡವೇ? "ನಾನು ನಿನ್ನಕಿಂತಲೂ ೨೦ ವರ್ಷ ಹಳಬ, ತಿಳಿಯಿತೇ?" ಎಂದು ಹೇಳಿದ್ದಕ್ಕೆ "ಈ ಗೋಡೆ ನಿಮ್ಮಗಿಂತ ೧೦೦ ವರ್ಷ ಹಳೆಯದು" ಎಂದು ಹೇಳಿದ ಒಬ್ಬ ಮುಟ್ಠಾಳ. ಎಲ್ಲೆಲ್ಲಿಯೂ ಅಷ್ಟ-ಕ್ಕಷ್ಟೆ. ಮನೆಯಲ್ಲಿ ಹಿರಿಮಗಳ ಹೆರಿಗೆ. ಹೆಂಡತಿಗೆ ಕಾಯಿಲೆ. ಎಲ್ಲ ವಯಸ್ಸಿನ ಮಕ್ಕಳೂ ಮನೆತುಂಬ, ಊಟದ ಹೊತ್ತಿಗೆ ಮಾತ್ರ. ಕಲ್ಪವೃಕ್ಷದಂತಹ ಸುಳ್ಳು ಇರಲಿಕ್ಕೆ ಸತ್ಯವನ್ನಾಡಿ ಸಾಯಬೇಕೇಕೆ? ನನಗೆ ಕಾಯಿಲೆ ಎಂದು ಹೇಳಿ ರಜೆಕೊಂಡು ಮನೆಯಲ್ಲಿಯೇ ಕುಳಿತೆ. ಅದೇಕೆ ಕುಳಿತೆನೋ ಎಂದು ಆಮೇಲೆ ಎನಿಸಿತು. ಹೆಂಡತಿ ಹಾಸಿಗೆ ಹಿಡಿದಳು. ಹೆರಿಗೆಗೆ ಬಂದ ಮಗಳು ದುಡಿಯಲು ಕುಳಿತರೆ ಹೇಗೆ? ಅಳಿಯದೇವರಿಗೆ ಕಣ್ಣು ಕೆಂಪಾಯಿತು. ಹೆಂಡತಿಯ ತಮ್ಮನಾಗಿ ಆಗ ಕಾಡಿದ; ಅಳಿಯನಾಗಿ ಈಗ ಕಾಡುತ್ತಾನೆ.

## ಹುಚ್ಚು—ಹುರುಳು

ಕುಳಿತೆ ಅಡಿಗೆಗೆ. ಹಸಿ ಕಟ್ಟಿಗೆ. 'ಈ ಗಂಡಸರಿಗೆ..........' ಎಂದೇನೋ ಅಂದುಬಿಟ್ಟೆ. ಕೂಡಲೇ ಸುಮ್ಮನಾದೆ. ನಾನೇ ಆ ಹಸಿ ಕಟ್ಟಿಗೆ ತಂದ ಗಂಡಸು.'ಇದ್ದಲುಚೀಲ ಎಲ್ಲಿದೆಯೋ' ಎಂದು ಹೊಗೆ ಕುಡಿಯುತ್ತ ಕೂಗಿದೆ.'ಆ ಪೀಣೆಯಮೇಲೆ ಇಟ್ಟಿದೆಯಲ್ಲ'ಎಂದು ಮಲಗಿ ದಲ್ಲಿಂದಲೇ ಉತ್ತರಿಸಿದಳು. ನಡೆಯಿತು ಹೀಗೆಯೆ ಕೆಲವು ಕಾಲ.

ಮನೆಯ ಹೊರಗೂ ಒಳಗೂ ಒಂದೇ ರೀತಿ. ಹೊರಬಾಗಿಲ ಮುಂದಿದ್ದ ತಿಪ್ಪೆಯೇ ಸಾಕು, ನಾನು ಮುನಿಸಿಪಲ್ ಕೌನ್ಸಿಲರ್ ಅಲ್ಲ ನೆಂದು ಹೇಳಲು. ಆದರೂ, ಎಷ್ಟು ಹೊಲಸೆಂದರೂ ಆದೇಶೋಲು. "ಹುಸಿನಗು ಕೋಣೆ" ಯಷ್ಟು ಅಳುಸೋರೆಯದಾಗಿಲ್ಲ ನಡುಮನೆ ಯಲ್ಲಂತೂ ಕಾಲಿಡುವಂತಿಲ್ಲ. ಗೂಡ್ಸ್‌ಸೆಡ್ ಹೊರಗೆ ಲಂಚ ಕೊಡದವನ ಮಾಲುಬಿದ್ದಂತೆ ಬಿದ್ದಿವೆ ಮಕ್ಕಳು ಅಸ್ತವ್ಯಸ್ತವಾಗಿ. ಅಜೀರ್ಣವಾಗ್ವ ವಷ್ಟು ಹಲವು ಉಂಡಿವೆ, ಉಪವಾಸ ಕೆಲವು ಮಲಗಿವೆ. ಹೋಮ್ ಗವರ್ನಮೆಂಟು ಆಡಾವುಡಿಯಾದರೆ ಇದೇ ಗತಿ! ನನ್ನ ಅವಳಿಗೆ ಕಾಹಿಲೆ ಪ್ರಬಲಿಸಿತು. ಮಾರೆಮ್ಮನ ಭಾಂಡಾರದಿಂದ ಹಿಡಿದು ಸರ್ಜನರ (ಸಜ್ಜ ನರಲ್ಲ) ಖಡ್ಗದವರಿಗೂ ಎಲ್ಲಕ್ಕೂ ತಲೆಬಾಗಿಯಾಯಿತು. ಇದ್ದುಬಿದ್ದುದ ನೆಲ್ಲ ಮಾರಿ ತೂರಿದೆ. ಅಡವು ಹಾಕಲು ಉಳಿದುದೆಂದರೆ ಬ್ಯಾಂಕು ಒಂದೇ. ಮಲಗಿದಲ್ಲಿಯೇ ಯೋಚಿಸುತ್ತ ಮೇಲೆ ನೋಡಿದೆ. ಏನಿದೆ ಗೋಡೆಗೆ? ನಗುವ ಸಿನೇಮ ನಟಿಯರಿಲ್ಲ: ಅವರಿಗೆ ಕೈಮುಗಿಯುವ ದೇಶಭಕ್ತರೂ ಇಲ್ಲ. ಒಮ್ಮೆ ಗೋಡೆಗೆ ಹಚ್ಚಿದ ಸುಣ್ಣದಮೇಲೆಲ್ಲ ಕೆಂಪು ಚಿಕ್ಕೆಗಳು! ಎದೆ ಧಸ್ಸೆಂದಿತು. ಹಾಲಿನವಳ 'ಕೆರೆಂಟು ಅಕೌಂಟು' ಅದು.

ಕಂಡವರೆಲ್ಲರೂ ಕೇಳಿದರು, 'ಏನಯ್ಯಾ ಅದು ಕಂಕುಳಲ್ಲಿ.' ನನ್ನ ಹೆಂಡತಿಯ ಫೋಟೋ! "ಈ ಮುಪ್ಪಿನಲ್ಲಿ ಫೋಟೋ ಬೇರೆ ಬೇಕಾ ಯಿತೇ?" ಎಂದೊಬ್ಬ ಅದನ್ನು ಕಸಿದ ಸಲುಗೆಯಿಂದ. ಓಹೋ 'ಎಕ್ಸ್‌ರೇ' ಎಂದು ತಲೆಕೆಳಗಾಗಿ ತಾಸು ಹಿಡಿದು ನೋಡಿದ. ಆ ಮೇಲೆ

ಗೊತ್ತಾಯಿತು. ಅವನು ಮೆಡಿಕಲ್ ಕಾಲೇಜಿಗೆ ಹೋಗಲು ವರದಕ್ಷಿಣೆಗಾಗಿ ಮದುವೆಯಾಗುತ್ತಿದ್ದಾನೆಂದು.

ಕೈ ಏಕೆ ಫ್ರಾಕ್ಚರ್ ಆಯಿತು ಎಂದ. ಸುರು ಮಾಡಿದ. "ಅದು ಕೈಯಲ್ಲವೋ, ಎದೆ ಎದೆ" ಎಂದೆ. "ಐಯೋ, ಎದೆಯಲ್ಲವೇ ಇದು. ಆಹುದು. ಹಲವರ ಕೈಯೂ ಹೀಗೇ ಇರುತ್ತೆ. ಎದೆ ಏಕೆ ಫ್ರಾಕ್ಚರ ಆಯಿತು." "ಡಾಕ್ಟರ್ ಬಿಲ್ಲು ಕೊಡಲು ರಡಿ" ಎಂದು ಹೇಳಿ ಫೋಟೋ ಕೈಯಲ್ಲಿ ಹಿಡಿದು ಮನೆಗೆ ಬಂದೆ. ಅವಳ ಸುಸಿಗೆಮ್ಮು, ಅಳಿಯನ ದುಸುಮುಸು, ಮಗಳ ಮೂಕ ಅಳು, ದೊಡ್ಡವನ ಓದು, ಚಿಕ್ಕ ಇಬ್ಬರ ಕುಸ್ತಿ, ಇನ್ನೊಬ್ಬನ ಉಂಡು ಅನ್ನ ಸತ್ಯಾಗ್ರಹ, ಮದುವೆಗಾದ ಮಗಳ ಪಿಟೀಲು, ಒಂದೇ ತೊಟ್ಟಿಲಿಂದ ಎರಡುಮಕ್ಕಳ ಚೀರಾಟ, ನನ್ನ ಹಸಿವೆ! ಹೊರ ಜಗುಲಿಯ ಮೇಲೆ ಹಾಗೆಯೇ ಅಡ್ಡಾದೆ. ಎಚ್ಚೆತ್ತಾಗ ನಡು ರಾತ್ರಿಯಾಗಿತ್ತು. ಎಲ್ಲರಿಗೂ ನಿದ್ರೆ. ಗಂಟೆ ಎಷ್ಟೆಂದು ಗಡಿಯಾರವನ್ನು ನೋಡಿದೆ- ಅದಕ್ಕೂ ನಿದ್ರೆ. ಪಾಪ! ಮದುವೆ ಕಾಲದಲ್ಲಿ ಗೆಳೆಯರು ಕೊಟ್ಟದ್ದು. ಇನ್ನೆಷ್ಟು ವರ್ಷಗಳಕಾಲ ಬಂದೀತು ? ನಿದ್ರೆ ಮಾಡೋಣ ವೆನಿಸಿತು. ಆದರೆ ತಿಗಣೆಗೂ ನಿದ್ರೆ ಬಂದರೆತಾನೆ? ಬಾಗಿಲನ್ನು ಮುಂದೆ ಳೆದು ಮೆಲ್ಲಗೆ ಹೊರ ಬಂದೆ. ರಸ್ತೆಯ ಆ ಬದಿ ಶಾಲೆ. ಶಾಲೆಯ ಕಟ್ಟೆಗೆ ತಲೆ ಇಟ್ಟುಕೊಡಲೇ ಶಿಕ್ಷಕರಂತೆ ಗೊರೆಕೆಗೆ ಆರಂಭಿಸಿದೆ.

ಬೆಳ್ಳಂ ಬೆಳಗಾದ ಮೇಲೆ ಅಲುಗಾಡಿಸಿ ಎಬ್ಬಿಸಿದ ನನ್ನ ಬಾವ. ಎದ್ದು ಕುಳಿತು ಕಣ್ಣು ತಿಕ್ಕಿದೆ. ಬೆಳಗಿನ ಗಾಡಿಗೆ ಬಂದಿರಬೇಕು. "ಏಕೋ ಇಲ್ಲಿ ಬಂದು ಮಲಗಿದಿ, ಕತ್ತೆಗಳಂತೆ ಶಾಲೆ ಕಟ್ಟೆಗೆ" ಎಂದ. ಕಥೆಯನ್ನೆಲ್ಲಾ ಕೇಳಿದ ನನ್ನಿಂದ, ಮರುಗಿದ.

"ಹೀಗೇಕೆ ಆಯಿತೋ ನಿನ್ನ ಬಾಳು, ಎಷ್ಟು ಮುದ್ದಾಗಿದ್ದಿತಲ್ಲೊ ನಿನ್ನ ಸಂಸಾರ ಚಿಕ್ಕದಿದ್ದಾಗ ?"

"ನೀನು ಆಗ ನೋಡಿದುದು ಕತ್ತೆ ಮರಿಯನ್ನು, ಬಾವ. ಅದಕ್ಕೇ ಅಷ್ಟು ಮುದ್ದಾಗಿತ್ತು ಅದು ಚಿಕ್ಕದಿದ್ದಾಗೆ. ನೀಳವಾದ ಕಾಲು, ಬಾಚಿ

ಕತ್ತರಿಸಿದ ಕ್ರಾಪು, ಪುಟ್ಟದಾದ ಬಾಲ, ಸ್ವಚ್ಛವಾದ ಮೈ, ಥಳಥಳ ಜಿಗಿಯುತ್ತಿದ್ದಾಗ ಕತ್ತೆಮರಿ ಮುದ್ದಲ್ಲವೇ? ಬೆಳದಂತೆಲ್ಲ ಸಂಸಾರ ಕತ್ತೆಯಂತೆಯೇ ನೋಡು. ಯಾವ ಶಾಲೆ ಕಟ್ಟೆಗೆ ಮಲಗಿದರೇನು? ಮೂಟೆ ಹೊರಿಸುವ ಅಗಸ ಹುಡುಕುತ್ತಾ ಬರಲ್ವೇ, ಹಾಗೆ ಹಿಂದೆಯೇ ಬರುತ್ತೆ ಕರ್ತವ್ಯ." "ಕತ್ತೆ ಮರಿ ಎನ್ನು ಏನಾದರೂ ಅನ್ನು, ನಿನ್ನ ಆ ಅಂದಿನ ಸಂಸಾರವೇ ಚೆಂದವಾಗಿತ್ತು ಬಿಡು."

"ಅಷ್ಟೇ, ಬರೀ ಚಂದ ಅಷ್ಟೆ ಆ ಮರಿ. ದೊಡ್ಡದಾಗಿ ತನ್ನ ಹೊರೆ ಹೊತ್ತರೆ ಅಲ್ಲವೆ ಜನ್ಮ ಸಾರ್ಥಕ? ಎಷ್ಟೋ ಕಳ್ಳ ಕತ್ತೆಗಳು ದೊಡ್ಡವಾದ ಮೇಲೂ ಇನ್ನೂ ಚಿಕ್ಕ ಮರಿಗಳಂತೆ ಕರ್ತವ್ಯವನ್ನು ತಪ್ಪಿಸಿ ಕೊಳ್ಳಲು ನೋಡುತ್ತವೆ. ಅದೇನು ಪ್ರಯೋಜನ? ಇರಲಿ, ಮನೆಗೆ ಹೋಗೋಣ ನಡೆ, ಆ ಮೇಲೆ ಅಗಸ ಇಲ್ಲಿಗೇ ಬಂದಾನು."

"ಕಷ್ಟ ಕೊಟ್ಟ ದೇವರು ನಿನಗೆ ಇಷ್ಟು ತಿಳುವಳಿಕೆಯನ್ನೂ ಕೊಟ್ಟಿದ್ದಾನೆ ಬಿಡು, ಅದೇ ಸಂತೋಷ"

"ದೇವರೇ, ಕಡೆಯುವರಿಗೂ ಇಷ್ಟೆ ನಡೆಸಿ ಬಿಡಪ್ಪ" ಎಂದು ಹೃತ್ಪೂರ್ವಕ ಹೇಳಿ ಮನೆಗೆ ಹೊರಟೆವು.



# ಕಣ್ಣೀರಿನ ಬಗ್ಗೆ

ಸಕಾಲವಾಗಿಯೋ ಅಕಾಲವಾಗಿಯೋ ಸತ್ತವರ ಬಗ್ಗೆ ಎರಡು ಒಳ್ಳೆಯ ಮಾತನ್ನು-ಸುಳ್ಳು ಬೆರಿಸಿಯಾದರೂ—ಆಡುವದು ಶಿಷ್ಟ ಸಂಪ್ರದಾಯ; ಸುಸಂಸ್ಕೃತಿಯ ಲಕ್ಷಣ. ಗೌರವವೂ ಅಹುದು, ಆಡುವವರಿಗೆ? ಸತ್ತವರ ಗುಣಗಾನ ಮಾಡುವದು ಎಂದಿಗೂ ತಪ್ಪಲ್ಲ; ಹೆಮ್ಮೆಯಿಂದ (ಸತ್ತವರ) ತಲೆಯಂತೂ ತಿರುಗುವಂತಿಲ್ಲವಲ್ಲ? ಆದರೆ ಸಾಯುವದು ಬರೀ ಸಂಪನ್ನರ ಹಕ್ಕು ಆಗಿದ್ದರೆ ಭಾಷಣಕಾರರ ಕೆಲಸವು ಹಗುರಾಗುತ್ತಿದ್ದಿತು. ಹಲವು ಸಾಯುವವರಂತೂ ಸಾಯುವರೆಗೂ ಒಂದಾದರೂ ಭಾಷಣ ಯೋಗ್ಯ ಕಾರ್ಯವನ್ನು ಮಾಡದೆ ಸಾಯುವರು. ಅಜಮಿಳನಂತೆ ಕಡೆಗೊಮ್ಮೆ 'ನಾರಾಯಣ' ಎಂದರೂ ಸಾಕಿತ್ತು. ಗೋಡಸೆ, ರಜವಿ, ಮುಂತಾದ ಮಹನೀಯರ ಆತ್ಮಕ್ಕೆ (ಆತ್ಮವಿದ್ದರೆ) ಶಾಂತಿ ಕೋರುವಾಗ ಭಾಷಣಕಾರರಿಗೆ ಆಗುವ ಕಷ್ಟವನ್ನು ಚೆನ್ನಾಗಿ ಊಹಿಸಬಹುದು. ಆದರೆ ಮಾನವ ಬುದ್ಧಿಗೆ ನಿಲುಕಲಾರದೇನಿದೆ? ಜನರಲ್ ಡಯರನಿಗೂ ಕಂಬನಿ ಬದ್ದಿರಬಹುದು. ತಿಂಮ ಒಂದು ಬಾರಿ ಮೃತರ ಆತ್ಮಕ್ಕೆ ಶಾಂತಿ ಕೋರಲು ಸಭೆ ಕರೆದು, ಜನರು ಸೇರುವ ಬಗ್ಗೆ ಯೋಚಿಸುತ್ತ ಕುಳಿತ. ಕಡೆಗೆ ನಾನು ಕೊಟ್ಟ ಸಲಹೆಯೇ ಅವನ

ಮೌನವನ್ನುಕಾಯಿತು. ಔತಣಸೋಲೆಯಲ್ಲಿ ಒಂದು ವಿ. ಸೂ:. ಸಭೆಯ ಪ್ರಾರಂಭದಲ್ಲಿ ಚಹಾ; ಕಡೆಯ ಕಾರ್ಯಕ್ರಮ, ತಾರಾಗಣದಲ್ಲಿ ಖ್ಯಾತಿ ಪೊಂದಿದ ಕುಮಾರಿ........ಳ ಗಾಯನ ಮತ್ತು ಇವರ ( ದತ್ತು ) ಪುತ್ರಿಯಾದ ಬೇಬಿ........ಳ ನರ್ತನ.

ಸತ್ತವರ ಹಿರಿಮೆಗಿಂತಲೂ ಕಂಬನಿ ಸಭೆಯ ಭಾಷಣಕಾರರ ಮಾತುಗಾರಿಕೆ ಬಹು ಮಹತ್ವದ್ದು, ಈ ಸಂದರ್ಭದಲ್ಲಿ. ಓರ್ವ ಮೃತರ ಬಗ್ಗೆ ಆಡಲು ಏನೂ ಇಲ್ಲವೆಂದು ಎಲ್ಲರೂ ಅನುಮಾನಿಸುತ್ತಿದ್ದಾಗ ತಿಂಮ ಎದ್ದು ನುಡಿದೇ ಬಿಟ್ಟ "ನಮ್ಮನ್ನಗಲಿದ ಮಾನ್ಯ ಶ್ರೀ........ಯವರಿಗೆ ಸಿಗರೇಟು ಎಂದರೆ ಪಂಚಪ್ರಾಣ." ಕೂಡಲೆ ಸಭಿಕರು—ಮೃತರನ್ನೂ ಸೇರಿಸಿ ಮೂವರು- ಕರತಾಡನ ಮಾಡಿ ತಮಗಾದ ದುಃಖವನ್ನು ಹರ್ಷೋದ್ಘೋಷದಿಂದ ಸೂಚಿಸಿದರು.

ಏಳು ತಲೆಮಾರುಗಳಿಂದ ಮುಂಡಾಗುತ್ತ ಬಂದಿದ್ದ ಐವತ್ತು ಲಕ್ಷ ರೂಪಾಯಿ ವರಮಾನದ ( ಸ್ಥಿರ ? ) ಚರಾಸ್ತಿಯನ್ನು ಲೋಲುಪ್ತತೆಯಲ್ಲಿ ಕರಗಿಸಿ, ಕೈಹಿಡಿದವಳಿಗೆ ಕಂಡವರ ಮುಂದೆ ಕೈಯೊಡ್ಡಿ ನಿಲ್ಲುವ ಗತಿ ತಂದು, ಧರ್ಮಾಸ್ಪತ್ರೆಯಲ್ಲಿ ಮರಣಹೊಂದಿ, ಮುನಸಿಪಾಲ್ಟಿಯವರಿಂದ ಕೊನೆ ಸಂಸ್ಕಾರಗಿಟ್ಟಿಸಿದ ಮೋಹನರಾಯರ ಬಗ್ಗೆ ಬಂದ ಲೇಖದಲ್ಲಿ ಚಿನ್ನದಂತೊಂದು ವಾಕ್ಯವಿದ್ದಿತು. "ಕೀ|| ಶೇ|| ಮೋಹನರಾಯರಿಗೆ ಚಿನ್ನ ಮಣ್ಣು ಸಮ."

ಔಷಧಿ ತೆಗೆದುಕೊಂಡರೆ ಹಣ ಖರ್ಚಾಗುತ್ತದೆಂದು ಕಡೆಗೂ ಡಾಕ್ಟರ ಮುಖಾವಲೋಕನ ಮಾಡದೆ, ಕಣ್ಣು ಮುಚ್ಚಿದ ಕೃಪಣ ಕಾಳಸೆಟ್ಟರನ್ನೂ ಕೊಂಡಾಡಲು ಶಬ್ದ ಸಂಪತ್ತು ಇದೆ ಸಾಹಿತ್ಯದಲ್ಲಿ. "ಹಣದ ಬೆಲೆ ತಿಳಿದವರು. ಮಿತವ್ಯಯದಲ್ಲಿ ಎತ್ತಿದ ಕೈ ಇವರದು. ಪ್ರಪಂಚದ ಅನುಭವಾಮೃತ ಸವಿದು ಸತ್ತರು."

## ಹುಚ್ಚು — ಹುರುಳು

ಮೊನ್ನೆ ಪತ್ರಿಕೆಯೊಂದರಲ್ಲಿ ಮೃತರಾದವರ ಭಾವಚಿತ್ರವಿದ್ದಿತು. ಹಿಡಿದುಕೊಳ್ಳಿರೆ ಬಹುಮಾನ ಕೊಡಿಸುವ ಭೂಗತವಾದ ಕಾಮಿ (ಕಮ್ಯುನಿಸ್ಟ) ಇರಬೇಕೆಂದು ಊಹಿಸಿದೆ. ಅಲ್ಲ. ಚಿತ್ರದಡಿಯಲ್ಲಿ ಒಂದೇ ವಾಕ್ಯವಿದ್ದಿತು. "ಒಳ್ಳೆಯ ಅಧಿಕಾರದಲ್ಲಿದ್ದು ಶ್ರೀ........ಅಯ್ಯರರು ತಮ್ಮ ಬಂಧು ಬಳಗಕ್ಕೆ ಬಲಗೈಯಂತಿದ್ದರು---ಮೃತರ ಹೆಂಡತಿಯು ತಮ್ಮನ ನೆರವಿನಿಂದ"

ಎಂಬತ್ತೈದನೆಯ ವಯಸ್ಸಿನಲ್ಲಿ ಸಾಯಲು ಇಷ್ಟವಿಲ್ಲದೆ ಸತ್ತ ಗೃಹಸ್ಥರ ಬಗ್ಗೆ ಬಂದ ದುಃಖ ಸೂಚಕ ಲೇಖದಲ್ಲಿ ಈ ದನಿಯಿದ್ದಿತು.

"ಮೂವತ್ತು ವರ್ಷ ಸತತ ಪ್ರಜಾಸೇವೆ (ಸರಕಾರಿ ಕಚೇರಿಯಲ್ಲಿ) ಮಾಡಿ, ಕೇವಲ ಮೂವತ್ತೈದೇ ವರ್ಷ ಪಿಂಚನಿಯನ್ನು ಅನುಭವಿಸಿ, ಪುತ್ರಹೀನರಾದ ಮೂರನೆಯ ಚಿಕ್ಕ ಪುಟ್ಟ ಹೆಂಡತಿಯನ್ನು ಬಿಟ್ಟು ಈ ಅಲ್ಪ ವಯಸ್ಸಿನಲ್ಲಿಯೇ ಕಣ್ಮರೆಯಾದ ಮಹಸೇಯರ ಆತ್ಮಕ್ಕೆ ಶಾಂತಿ ಕೋರುತ್ತೇವೆ" ಕೋರಿದ್ದೆಲ್ಲವೂ ಆಗಲು ಸಾಧ್ಯ? ಶಾಂತಿ?

ಎಲ್ಲರಿಗೂ ಅಪರಿಚಿತನಾಗಿ ಕಣ್ಣುಮುಚ್ಚಿದೊಬ್ಬರ ಪರಿಚಯವನ್ನು ಅತಿ ಜಾಣತನದಿಂದ ಸಭಿಕರಿಗೆ ಮಾಡಿಕೊಡುವ ಚಾಣಿಕ್ಯತನವೂ ಉಂಟು.

"ಕೀರ್ತಿ ಶೇಷರಾದ ಮಾನ್ಯ.... ...ರವರು ನಮ್ಮೆಲ್ಲರಿಗೂ ಚಿರಪರಿಚಿತರು. ೧೯೪೩ ರ ಮುನ್ನ ಸರಕಾರದಿಂದ ನಿಯಮಿಸಲ್ಪಟ್ಟ ಮಂತ್ರಿಗಳಾದ ರಾವಬಹದ್ದೂರ.........ರವರ ಹೆಂಡತಿಯ (ಮಲ) ತಾಯಿಯ ತಂಗಿಯ ಸಾಕ್ಷಾತ್ ಮಕ್ಕಳು ಇವರು. ಇವರು ತಮ್ಮ ಹೆಂಡತಿ ಮಕ್ಕಳನ್ನು ಬಹಳ ಅಂತಃ ಕರುಣದಿಂದ ಕಾಣುತ್ತಿದ್ದರು. ಅದಕ್ಕೆ ನಾವೆಲ್ಲರೂ ಚಿರಋಣಿ."

ಹೆಂಡತಿಯ ತಾಳಿಯನ್ನು ಮಾರಿ, ಕಡೆಗೂ ಸಾಲಗಾರರ ದವಡೆಯಲ್ಲಿ ಸಿಕ್ಕು, ಸಿವಿಲ್ ಜೈಲಿನ ಪಾಲಾದ ಆಪ್ತ ಮಿತ್ರರಿಗೆ ಕಾಲಾಣೆ

ಯನ್ನೂ ಕೊಡದೆ ಸತ್ತಿದ್ದ ಕುಬೇರಸೆಟ್ಟರ ಕಂಬನಿ ಸಭೆಯಲ್ಲಿ "ಅವರ ವರ ಕರ್ಮ ಅವರಿಗೆ ಎಂಬುದರಲ್ಲಿ ಕುಬೇರಸೆಟ್ಟರಿಗೆ ಸಂಪೂರ್ಣ ವಿಶ್ವಾಸವಿದ್ದಿತು. ಸ್ನೇಹದಲ್ಲಿ ವ್ಯವಹಾರವನ್ನು ಬೆರೆಸುವ ದಡ್ಡರವರಲ್ಲ" ಎಂದು ಉದಾರ ಹೃದಯದ ಸೆಟ್ಟರನ್ನು ಕೊಂಡಾಡಲೂಬಹುದು.

ಬೋರ್ಡ್ ಅಧ್ಯಕ್ಷರಾಗಿ ಚುನಾಯಿಸಿದ ತಿಂಗಳಲ್ಲಿಯೇ ಹತ್ತು ಸಮಿತಿಗಳಿಗೆ, ಹನ್ನೆರಡು ಮಂಡಳಿಗಳಿಗೆ, ಹದಿನಾಲ್ಕು ಸಭೆಗಳಿಗೆ ಗೌರವ ಅಧ್ಯಕ್ಷ ಉಪಾಧ್ಯಕ್ಷರಾಗಿ, ಹದಿನಾರು ಭಾವಚಿತ್ರ ಅನಾವರಣ ಮಹೋತ್ಸವಗಳಿಗೆ ಕೈಕೊಟ್ಟ ಅಮೃತ ಹಸ್ತದವರಾಗಿ, ಬೀಡಿ ಅಂಗಡಿ ಯಿಂದ ಭಜನ ಮಂದಿರದ ವರೆಗೂ, ಸಲೂನಿನಿಂದ ಆಣೆಕಟ್ಟಿನ ವರೆಗೂ, ಆದಿಶೇಷನ ನಡೆನೆತ್ತಿ ಮುಟ್ಟಿದ ಬಾವಿಯಿಂದ ಆಕಾಶದಲ್ಲಿ ಕಟ್ಟಿಡ ಕಟ್ಟಿದ ವಿಮಾನ ಕಂಪೆನಿಯವರಿಗೂ ಬುನಾದಿ ಕಲ್ಲನ್ನು ಹಾಕಿ, ಕಂಠಗತವಾದ ಭಾಷಣವನ್ನು ದುಃಖಸೂಚಕ ಸಭೆಯೊಂದರಲ್ಲಿ ಪ್ರಾರಂಭಿಸಿಯೇ ಬಿಟ್ಟರು ಒಂದುಬಾರಿ.

"ಈ ಸಂತೋಷದ ನೂತನ ಸಮಾರಂಭದಲ್ಲಿ ನೀವು ನನ್ನನ್ನು ಬರಮಾಡಿಕೊಂಡದ್ದು ನನ್ನ ಪುಣ್ಯ ಭಾಗ್ಯವೇ ಸರಿ. ನನಗೆ ಆಗಿರುವ ಆನಂದವು ಅಷ್ಟಿಷ್ಟಲ್ಲ............"

ರಾಜಕೀಯ ವರ್ಗದಲ್ಲಿ ವಾರಕ್ಕೊಮ್ಮೆ ಪಾರ್ಟಿ ಬದಲಾಯಿಸಿ, ಅದಕ್ಕೆ ತಕ್ಕಂತೆ ನೀತಿ ರೀತಿ ಮಾತಿನ ಧೋರಣೆಯನ್ನೂ ತಿರುವಿ, ಬಿಸಿಲು ನೋಡಿ ಕೊಡೆ ಹಿಡಿದು, ಬಿದ್ದ ಆಕಳ ಬಾಲ ತುಳಿದು, ಗೆದ್ದ ಎತ್ತಿನ ಬಾಲ ಹಿಡಿದು, ಒಮ್ಮೆ ರಾ. ಸಾ. ಇನ್ನೊಮ್ಮೆ ಧೇ. ಭ. ಸದ್ಯಕ್ಕೆ ಕ. ಸಾ. (ಕಳ್ಳಸಂತೆ ಸಾಹುಕಾರ) ಅದ ಚತುರ ರಾಜಕಾರಣಿಗಳ ಗುಣವರ್ಣನೆ ಮಾಡುವಾಗ ಎರಡೇ ಮಾತು ಸಾಕಲ್ಲವೆ? ದಿವಂಗತರಾದ ರಾ. ಸಾ. ದೇ. ಭ. ಕ. ಸಾ.........ರವರು ಮೂಢನಂಬಿಕೆಯ ಮೂರ್ಖ ಹಿಂದಾ ಳಲ್ಲ. ತಮ್ಮದೇ ಆದ ವೈಯಕ್ತಿಕ ವಿಚಾರಶಕ್ತಿಯಿದೆ: ಆತ್ಮವಿಶ್ವಾಸವಿದೆ; ಭಿನ್ನಾಭಿಪ್ರಾಯವನ್ನು ನಿರ್ಭಯದಿಂದ ವ್ಯಕ್ತಮಾಡುವ ಮನೋಬಲ

ವಿದೆ. ತಾವು ತುಳಿದದ್ದನ್ನೇ ಹಾದಿಯನ್ನಾಗಿ ಮಾಡಬಲ್ಲ ಚೇತನವಿದೆ ಇವರಿಗೆ."

ಎತ್ತು ಮೂಟೆ ಹೊತ್ತಂತೆ ಡಿಗ್ರಿಗಳನ್ನು ಹೊತ್ತು, ಸೇಂಗ ತಿಂದು ಸಂತೆಗಳಲ್ಲಿ ಟೊಪ್ಪಿಗೆಗಳನ್ನು ಮಾರಿ ಸತ್ತವರು ವಿಭೂತಿಗಳು, ಅಚಲ ವಿಶ್ವಾಸದ ಗಾಂಧೀಭಕ್ತರು ಎಂದು ಸತ್ತನಂತರ ಕೊಂಡಾಡಿಸಿ ಕೊಳ್ಳಲೂ ಬಹುದು.

ಗೆಳೆಯನನ್ನು ಕಳೆದುಕೊಂಡ ತಿಂದು ಅಗಲಿದ ಗೆಳೆಯನ ಬಗ್ಗೆ ಹೇಳುವಾಗ ಒಳ್ಳೆಯ ಜಾಣತನದಿಂದ ನುಡಿದ ಒಂದು ಬಾರಿ.

"ನಮ್ಮೆಲ್ಲರ ಮಿತ್ರರಾಗಿದ್ದ........ರು ವಿದ್ಯಾಭ್ಯಾಸದಲ್ಲಿ ಬಹು ಮಿಗಿಲಾದವರಿದ್ದರು. ನಾಲ್ಕು ವರ್ಷದ ಕೋರ್ಸನ್ನು ನಾಲ್ಕೇ ವರ್ಷ ಗಳಲ್ಲಿ ಮುಗಿಸಿಬಿಟ್ಟರು."

ಹತ್ತು ವರ್ಷಗಳು ಹಲಗೆಯ ಮೇಲೆ ತೀಡಿದರೂ 'ರ ಠ' ಸಹ ಬರದೆ ಸತ್ತ ಓರ್ವ ಬೃಹಸ್ಪತಿಗಾಗಿ ಕಂಬನಿ ಸುರಿಸಲು ಸೇರಿದ ಸಭೆ ಯಲ್ಲಿ ತಿಂದು ಮಾತನಾಡಿ ಶಬಾಸ್ ಸಂಪಾದಿಸಿದ.

"ನಮ್ಮ ಬೃಹಸ್ಪತಿಗಳಿಗೆ ಈಗ ಮರಣವು ಬರಬಾರದಿತ್ತು. (ಇನ್ನೂ ಮುಂಚಿತವಾಗಿಯೇ ಬರಬೇಕಿತ್ತು?) ಶಾಲೆಯಲ್ಲಿದ್ದಾಗ ಇವರು ಸದಾ ಕಡೆ ಬೆಂಚಿಯ ಒಡೆಯರಾಗಿದ್ದರು. ಆದರೇನು? ಚರ್ಚಿಲ್ಲರು ಮಾತ್ರ ಶಾಲೆಯಲ್ಲಿ ಅನುಗಾಲವೂ ಹಿಂದೆ ಉಳಿದಿರಲಿಲ್ಲ ವೇನು? ಹ್ಯಾರೋ ಶಾಲೆಯಲ್ಲಿ ಕೆಳತರಗತಿಗಳಲ್ಲಿಯೇ ಎಷ್ಟು ವರ್ಷ ಗಳನ್ನು ಇವರು ಕಳೆಯಲಿಲ್ಲ? ಥಾಮಸ್ ಎಡಿಸನ್ನನಂತಹ ದಡ್ಡ ವಿದ್ಯಾರ್ಥಿಯು ಯಾರಿದ್ದರು? ಇವನು ಸದಾ ಎಬಡನಾಗಿಯೇ ಉಳಿಯುತ್ತಾನೆ ಎಂದು ಇವನ ಮಾಸ್ತರರು ಪತ್ರ ಬರೆದು ಕೊಟ್ಟು ಇವನನ್ನು ಮನೆಗೆ ಕಳಿಸಿರಲಿಲ್ಲವೆ? ಪ್ರೆಸಿಡೆಂಟ್ ರೂಜವೆಲ್ಟರು ಕಾಯಿದೆ ಪರೀಕ್ಷೆಯಲ್ಲಿ ನಾಪಾಸಾಗಲಿಲ್ಲವೇನು? ನಮ್ಮನ್ನಗಲಿದ ಈ ಗೆಳೆಯರಾದರೂ ಇನ್ನೂ ಹಲವು ಕಾಲ ಬದುಕಿದ್ದರೆ ಇನ್ನಾವಾವ ಪರೀಕ್ಷೆಗಳಲ್ಲಿ ನಪಾಸಾಗುತ್ತಿದ್ದರೋ ಯಾರು ಬಲ್ಲರು!"

## ನಮ್ಮ ಆರ್ಥಿಕ ದುಸ್ಥಿತಿ

(೧)

ಕರ್ನಾಟಕದಲ್ಲೊಂದೂರು.
ತೇ॥ ದಸರೆಯ ಮುಂದೊಂದು.

ಮಾನ್ಯರೆ,

ಅನಂತ ಪ್ರಣಾಮಗಳು. ಪ್ರತಿವರ್ಷದಂತೆ ಈ ವರ್ಷವೂ ನಮ್ಮೂರಲ್ಲಿ ಮುಂಬರುವ ದಸರೆಯಲ್ಲಿ ನಾಡಹಬ್ಬದ ಕಾರ್ಯಕ್ರಮವನ್ನು ನಡೆಸಬೇಕೆಂದು ನಿರ್ಧರಿಸಿದ್ದೇವೆ. ತಮ್ಮಂತಹ ಸುಪ್ರಸಿದ್ಧ ಸಾಹಿತಿಗಳು ಸಹಕರಿಸಿ ಸಹಾಯ ಮಾಡದಿದ್ದಲ್ಲಿ, ನಮ್ಮ ನಿರ್ಧಾರವು ಫಲಕಾರಿಯಾಗಲು ಸಾಧ್ಯವೇ ಇಲ್ಲ. ತಾವು ಕೃಪೆಮಾಡಿ ನಮ್ಮ ಈ ಕರೆಗೆ ಓಕೊಟ್ಟು ಬಂದು ಭಾಗವಹಿಸಿ, ಇಲ್ಲಿಯ ಪುರಜನರಿಗೆ ತಮ್ಮ ಭಾಷಣದಿಂದ ಜ್ಞಾನಾಮೃತ ಪಾನಮಾಡಿಸುವಿರೆಂದು ನಂಬುತ್ತೇವೆ. ತಮಗೆ ಅನುಕೂಲವಾಗುವ ತೇದಿಯನ್ನೂ ತಮ್ಮ ಭಾಷಣದ ವಿಷಯವನ್ನೂ ಆದಷ್ಟು ಜಾಗ್ರತೆ ತಿಳಿಸಿದರೆ ಪ್ರಕಟಿಸಲು ಅನುಕೂಲವಾಗುತ್ತದೆ.

ನಿಮ್ಮ ಉತ್ತರದ ಹಾದಿಯನ್ನು ಕಾಯುತ್ತಿದ್ದೇನೆ.

ಇತಿ ನಿಮ್ಮವ

× × × ×

ಕಾರ್ಯದರ್ಶಿ ನಾಡಹಬ್ಬ ಸಮಿತಿ

ಹುಚ್ಚು—ಹುರುಳು

(೨)

ಕನ್ನಡ ಭಾಷಣಕಾರರೂರು
ತೇ|| ಎರಡು ದಿನಗಳನಂತರ.

ನಾಡಹಬ್ಬ ಸಮಿತಿಯ ಕಾರ್ಯದರ್ಶಿಗಳಿಗೆ—

ನಿಮ್ಮ ಪತ್ರವು ಕೈಸೇರಿತು. ಅಯ್ಯೋ! ನೀವು ಮಾಡುತ್ತಿರುವ ಕನ್ನಡ ಮಾತೆಯ ಸೇವೆಯಲ್ಲಿ ನಾನು ಸಹಕರಿಸಿ ಸೇವೆ ಮಾಡಲು ಎಂದಾದರೂ ಆಗದು ಅಂದೇನೆಯೇ? ನನ್ನ ಅಲ್ಪ ಸೇವೆಯನ್ನು ಸಲ್ಲಿಸಲು ಸದಾ ಸಿದ್ಧನಿದ್ದೇನೆ. ನಿಮ್ಮ ಅಪ್ಪಣೆಯನ್ನು ಮೀರಲು ಸಾಧ್ಯವೆ ಸ್ವಾಮಿ ನನ್ನಿಂದ? ನನ್ನ ಭಾಷಣವನ್ನು ಅಗತ್ಯವಾಗಿ..........ನೇ ತೇದಿಗೆ ಏರ್ಪಡಿಸಿಬಿಡಿ.

ಚಿಕ್ಕೊಂದು ವ್ಯವಹಾರಿಕ ವಿಷಯ: ಇಂದಿನ ರೇಲ್ವೆ ಪ್ರವಾಸದ ತೊಂದರೆ ನಿಮಗೆ ತಿಳಿಯದೆ ಇಲ್ಲ. ಇಂಟರ ಪ್ರವಾಸವಂತೂ ಸಾಧ್ಯವೇ ಅಲ್ಲ; ಅಲ್ಲದೆ ನನ್ನಂತಹ ಪ್ರಸಿದ್ಧ ಪ್ರಖ್ಯಾತಿ ಪುರುಷನ ಸ್ಥಾನ-ಮಾನಕ್ಕೆ ಗೌರವವೂ ಅಲ್ಲ ಅನ್ನಿ. ಕಾರಣ ಕನಿಷ್ಟ ಪಕ್ಷ ನೀವು ಎರಡನೆಯ ವರ್ಗದ ವೆಚ್ಚವನ್ನು ಭರಿಸುವದಾದರೆ ಮಾತ್ರ ನನಗೆ ಬರಲು ಅನುಕೂಲ. ನಿಷ್ಠುರವಾಗಿ ತಿಳಿಸಿದ್ದೇನೆಂದು ಬೇರೆ ಏನೂ ತಿಳಿಯಬೇಡಿ.

ನಿಮ್ಮ ಸೇವೆಗೈಯಲು ಸಿದ್ಧನಿರುವ
× × × ×

(೩)

ಕರ್ನಾಟಕದಲ್ಲೊಂದೂರು
ತೇ|| ಎರಡು ದಿನಗಳ ನಂತರ

ಮಹನೀಯರೆ,

ಆಯಿತು. ಎರಡನೆ ವರ್ಗದ ಪ್ರಯಾಣದ ಕರ್ಚನ್ನು ಕೊಡಲು ನಮ್ಮ ಸಮಿತಿಯನ್ನು ಒಪ್ಪಿಸಿದ್ದೇನೆ. ನೀವು ಸೂಚಿಸಿದಂತೆ.............. ತೇದಿಗೆ ನಿಮ್ಮ ಭಾಷಣ.

ಭಾಷಣದ ವಿಷಯವನ್ನಿಷ್ಟು ದಯವಿಟ್ಟು ತಿಳಿಸುವಿರಾ ?

ಇಂತು ಬೇಡುವ,

× × × ×

ಕಾ. ನಾ. ಸಮಿತಿ

(೪)

ಕನ್ನಡ ಭಾಷಣಕಾರರೂರು

ತೇ|| ಎರಡು ದಿನಗಳನಂತರ

ಕಾರ್ಯದರ್ಶಿಗಳಾದ..............ರವರೆ,

ನೀವು ಕೇಳಿದಂತೆ ವಿಷಯವನ್ನು ತಿಳಿಸುತ್ತೇನೆ.

ಇನ್ನೊಂದು ವಿಷಯ ಉಂಟು. ನಾನು ಮನೆಯಿಂದ ಟ್ಯಾಕ್ಸಿಯಲ್ಲಿ ಹೊರಟು ನಿಮ್ಮೂರಲ್ಲಿ ನೀವು ಏರ್ಪಡಿಸುವ ಬಿಡಾರ ಮುಟ್ಟುವವರೆಗೂ ಬರೀ ಚಿಲ್ಲರೆ ಕರ್ಚೇ ಹೇರಳವಾಗಿ ಬಿಡುತ್ತೆ ಕಣ್ರೀ. ಕೂಲಿ ಅನ್ನಿ ಇನ್ನೊಂದು ಅನ್ನಿ. ಪ್ರವಾಸದಲ್ಲಿ ಹಣ್ಣು ಹಂಪಲನ್ನು ತಿನ್ನುವ ಅಭ್ಯಾಸ ಬೇರೆ ನನಗೆ. ಅದರ ಬಗ್ಗೆ............ರೂಪಾಯಿಗಳನ್ನು ತಾವು ಕೊಡ ಬೇಕಾಗುತ್ತದಲ್ಲ ?

ಸದಾ ಸೇವೆಗೈಯಲು ಹಾತೊರೆಯುವ

× × × ×

(೫)

ಕರ್ನಾಟಕಲ್ಲೊಂದೂರು

ತೇ|| ಎರಡು ದಿನಗಳನಂತರ

ಹಿರಿ ಸಾಹಿತಿಗಳೆ,

ಚಿಲ್ಲರೆ ಕರ್ಚಿಗಾಗಿ............ರೂಪಾಯಿಗಳನ್ನು ಕೊಡಲು ನಮ್ಮ ಕಾರ್ಯಕಾರಿ ಸಮಿತಿಯು ನಿರ್ಧರಿಸಿದೆ.

ತಾವು ಯಾವ ವಿಷಯದಮೇಲೆ ಮಾತನಾಡುತ್ತೀರಿ ಎಂಬುದನ್ನಿಷ್ಟು ತಿಳಿಸಿಬಿಟ್ಟರೆ ಉಪಕಾರವಾದೀತು.

ತಮ್ಮ ಭಾಷಣಾಭಿಲಾಷಿ
× × × ×
ಕಾರ್ಯದರ್ಶಿ, ನಾಡಹಬ್ಬ ಸಮಿತಿ.

(೬)

ಕನ್ನಡ ಭಾಷಣಕಾರರೂರು
ತೇ॥ ಎರಡು ದಿನಗಳನಂತರ

ಗೆಳೆಯ ಕಾರ್ಯದರ್ಶಿಗಳಿಗೆ,

ಭಾಷಣದ ವಿಷಯವನ್ನು ನಿರ್ಧರಿಸಿದ್ದೇನೆ. ಇಗೋ ತಿಳಿಸಿರುತ್ತೇನೆ

ಇನ್ನೊಂದು ಚಿಕ್ಕಮಾತು. ನನ್ನ ಮೂರನೆಯ ಮಗು-ಅವನಿಗೆ ರೈಲಿನಲ್ಲಿ ಅರ್ಧಚಾರ್ಜು ಮಾತ್ರ–ನನ್ನನ್ನು ಬಿಟ್ಟು ಅರಗಳಿಗೆಯೂ ಇರಲರಿಯದು. ಅನಿವಾರ್ಯವಾಗಿ ಅವನನ್ನೂ ನನ್ನೊಟ್ಟಿಗೆ ಎರಡನೇ ವರ್ಗದಲ್ಲಿಯೇ ಕರೆತರಬೇಕಾಗಿದೆ. ನಿಮಗೆ ಇದೇನು ಮಹಾ ವೆಚ್ಚ ಬಿಡಿ. ಮುಂಚಿತವಾಗಿ ಸ್ಪಷ್ಟವಿರುವುದು ಮೇಲೆಂದು ಇದನ್ನು ತಿಳಿಸಬೇಕಾಯಿತು ಅನ್ಯಥಾ ಭಾವಿಸಬೇಡಿ.

ನಿಸ್ವಾರ್ಥ ಬುದ್ಧಿಯಿಂದ ಸೇವೆ ಗೈಯುವ,
× × × ×

(೭)

ಕರ್ನಾಟಕದಲ್ಲೊಂದೂರು.
ತೇ॥ ಎರಡು ದಿನಗಳನಂತರ

ಸುಪ್ರಸಿದ್ಧ ಸಾಹಿತಿಗಳಾದ ಶ್ರೀ....... ರಿಗೆ,

ನಿಮ್ಮ ಚಿರಂಜೀವನನ್ನು ಬಿಟ್ಟು ಬನ್ನಿ ಎಂದು ಹೇಳಲು ಆದೀತೆ?

ಜಗತ್ಯ ಕರೆದುಕೊಂಡು ಬನ್ನಿ. ಆದ ವೆಚ್ಚವನ್ನು ಹೊರಲು ಸಿದ್ಧರಿದ್ದೇವೆ. ವಿಷಯವನ್ನು ತಿಳಿಸಲು ಮರೆತಿರಿ. ದಯವಿಟ್ಟು ತಿಳಿಸುವಿರಾ ?

ತಮ್ಮ ಭಾಷಣಪ್ರೇಮಿ

× × × ×

ಕಾರ್ಯದರ್ಶಿ, ನಾಡಹಬ್ಬ ಸಮಿತಿ

(೮)

ಕನ್ನಡ ಭಾಷಣಕಾರರೂರು.

ತೇ|| ಎರಡು ದಿನಗಳ ನಂತರ

ಗೆಳೆಯ……………ರವರಿಗೆ,

ಅಹುದು, ತಾವು ಬರೆದಂತೆ ವಿಷಯವನ್ನೇ ತಿಳಿಸಲು ಮರೆತಿದ್ದೆ ಈಗ ತಿಳಿಸುತ್ತೇನೆ.

ನನ್ನ ಕುಮಾರನು ನನ್ನೊಡನೆ ನಿಮ್ಮೂರಿಗೆ ಬರುತ್ತಾನೆಂದು ತಿಳಿದ ಕೂಡಲೆ, ಮನೆಯಲ್ಲಿ ಅನರ್ಥದ ಪರಂಪರೆಯಾಗಹತ್ತಿದೆ. ಹನ್ನೆ-ರಡು ವರ್ಷದ ಅವನ ಅಕ್ಕ, ಬರೀ ಅನ್ನ ನೀರನ್ನಷ್ಟೆ ಅಲ್ಲ–ಪಿಟೀಲುಸಹ ಮುಟ್ಟದೆ ಕುಳಿತು ಬಿಟ್ಟಿದ್ದಾಳೆ. ಅವಳನ್ನು ಬಿಟ್ಟು ಹೊರಡುವದಂತೂ ಆಗದ ಮಾತು. ಅಲ್ಲದೆ ಅವಳ (ಪಿಟೀಲುಸಹಿತ) ಪ್ರಾರ್ಥನೆಯಾದರೆ ನನ್ನ ಭಾಷಣಕ್ಕೂ ಇದೊಂದು ಬಗೆಯ ಸ್ಫೂರ್ತಿ ನೋಡಿ. ಅವಳೂ ಬರಲಿ ತಾನೆ? ಮಕ್ಕಳೆಂದಮೇಲೆ ಎಲ್ಲರೂ ಒಂದೇ ಅಲ್ಲವೆ ? ಸ್ವಾಮೀ, ಹೇಗೂ ಕರ್ಚಿನಲ್ಲಿ ಕರ್ಚು ನಿಮಗೆ.

ನಿಮ್ಮೆಲ್ಲರ ನಿಸ್ವಾರ್ಥ ಅಡಿಯಾಳು

× × × ×

(೯)

ಕರ್ನಾಟಕದಲ್ಲೊಂದೂರು.
ತೇ॥ ಎರಡು ದಿನಗಳನಂತರ

ಸಾಹಿತ್ಯ ಋಷಿವರ್ಯರೇ,

ಭಾಷಣದ ವಿಷಯವನ್ನು ತಿಳಿಸಲು ಪುನಃ ಮರೆತಿರಿ. ಮರುಟಪಾಲಿಗೆ ಬರೆದು ತಿಳಿಸಿ. ಕಾರ್ಯಕ್ರಮವನ್ನು ಅಚ್ಚಿಗೆ ಕೊಡಬೇಕಾಗಿದೆ.

ನಿಮ್ಮ ಕುಮಾರಿಯೂ ನಿಮ್ಮೊಡನೆ ಬರಲಿ. ಆಯಿತು ತಾವು ಹೇಳಿದಂತೆ ಕಚೇರಿನಲ್ಲಿ ಕಚೇರಿ.

ತಮ್ಮ ಭಾಷಣಕ್ಕಾಗಿ ಕುತೂಹಲದಿಂದ ಕಾದಿರುವ
× × × ×
ಕಾರ್ಯದರ್ಶಿ, ನಾಡಹಬ್ಬ ಸಮಿತಿ

(೧೦)

ಭಾಷಣಕಾರರೂರು
ತೇ॥ ಎರಡು ದಿನಗಳನಂತರ

ಗೆಳೆಯರೆ,

ಎಷ್ಟು ಮರೆವು ನೋಡಿ ನನಗೆ? ವಿಷಯವನ್ನು ತಿಳಿಸುತ್ತೇನೆಂದು ಬರೆದಿದ್ದೇನೆ ಹಿಂದಿನ ಪತ್ರದಲ್ಲಿ. ಅಷ್ಟರಲ್ಲಿಯೇ ನೆನಪು ಹಾರಿದೆ.

ನೆನಪಿನ ಮಾತು ಬಂದರೆ ಈಗ ಇದೊಂದು ನೆನಪಾಯಿತು. ನಾವು ನಿಮ್ಮೂರಿಗೆ ಬರುತ್ತೇವೆ, ಸರಿ ಆಯಿತು ಅನ್ನಿ. ಆದರೆ ಚಿಕ್ಕೊಂದು ತೊಡರು: ಸನಿಯದ ಹಾದಿಯಾದ........ಜಂಕ್‌ಷನ್ನಮೇಲೆ ಬಾರದೆ, ಕಾರಣಾಂತರಗಳಿಂದ ಸುತ್ತು ಮಾರ್ಗವಾದರೂ........ಜಂಕ್‌ಷನ್‌ಮೇಲೆ ಬರಬೇಕಾಗಿದೆ. ಪುನಃ ಅದೇ ಮಾರ್ಗದಿಂದಲೇ ಹಿಂದಿರುಗಬೇಕಾಗಿದೆ. ನಾವು ಈ ದೂರದ ಹಾದಿಯಲ್ಲಿ ಬಂದು ಹೋಗಬೇಕಾಗಿರುವುದರಿಂದ

ನೀವು ಕೊಡಬೇಕಾಗುವ ಹಾದಿ ಕರ್ಚು ಒಂದೂವರೆಯಷ್ಟು ಹೆಚ್ಚಾಗುವುದು. ಮುಂಚಿತವಾಗಿ ಬರೆದು ತಿಳಿಸಿದುದು ಒಳಿತಲ್ಲವೆ ?

ನಿಮ್ಮ ಸೇವಾಪ್ರಸಕ್ತ

× × × ×

(೧೧)

ಕರ್ನಾಟಕದಲ್ಲೊಂದೂರು

ತೇ॥ ಎರಡು ದಿನಗಳನಂತರ

ಶ್ರೇಷ್ಠ ಸಾಹಿತ್ಯಜ್ಞರಾದ........ರವರಿಗೆ,

ತಮಗೆ ಯಾವ ಮಾರ್ಗವು ಅನುಕೂಲವೋ, ಆ ಮಾರ್ಗದಿಂದಲೇ ಬನ್ನಿ. ಕೊಂಚ ಹೆಚ್ಚು, ಕೊಂಚ ಕಡಿಮೆ.

ಅಹುದು, ವಿಷಯವನ್ನೇ ತಿಳಿಸಲಿಲ್ಲವಲ್ಲ ಇನ್ನೂ ?

ನಿಮ್ಮ ಅಮೃತವಾಣಿಗಾಗಿ ಚಕೋರನಂತೆ ಕಾದಿರುವ

× × × ×

ಕಾರ್ಯದರ್ಶಿ, ನಾಡಹಬ್ಬ ಸಮಿತಿ

(೧೨)

ಭಾಷಣಕಾರರೂರು

ತೇ॥ ಎರಡು ದಿನಗಳ ನಂತರ

ಪ್ರಿಯ ಮಿತ್ರರೆ,

ನನ್ನ ಭಾಷಣದ ವಿಷಯವನ್ನು ಕೆಳಗೆ ತಿಳಿಸಿದ್ದೇನೆ. ಅದರ ಮೇಲೆ ಮಾತನಾಡುತ್ತೇನೆ.

ಅದೆಲ್ಲವೂ ಆಯಿತು. ನೀವು ಎಂತಹ ತಪ್ಪು ಮಾಡಿದ್ದೀರಲ್ಲ? ಪ್ರತಿಯೋರ್ವ ಮನುಷ್ಯನೂ, ತತ್ರಾಪಿ ಸ್ಫೂರ್ತಿಮಂತ ಸಾಹಿತಿಯು, ತಪ್ಪದೆ ನೋಡಲೇ ಬೇಕಾದ ಚಾರಿತ್ರಿಕ ಪ್ರಖ್ಯಾತಿ ಹೊಂದಿದ ವಿಜಯ

ನಗರ ಸಾಮ್ರಾಜ್ಯದ ಹಂಪೆ  ಬಹು ಸಮೀಪವಂತೆ ನಿಮ್ಮ ಊರಿಗೆ, ಅಹುದೇ? ಒಳ್ಳೆಯ ಕಾರು ಆದರೆ ಮೂರೇ ತಾಸಿನ ಹಾದಿಯಂತಲ್ಲ? ಹಂಪೆಯನ್ನು ಸುತ್ತಿ ಬರಲು ಕಾರೊಂದನ್ನು ಸಿದ್ಧಪಡಿಸಿಗೊಳ್ಳಿ, ಇಲ್ಲವಾದರೆ ನಾನು ಅಷ್ಟುದೂರ ಬರುವುದರಲ್ಲಿ ಏನೂ ಅರ್ಥವಿಲ್ಲ. ನಿಮ್ಮ ಅನುಕೂಲವನ್ನು ತಿಳಿಸಿಬಿಡಿ. ನಿರ್ದಾಕ್ಷಿಣ್ಯವಾಗಿ ಬರೆದುದಕ್ಕೆ ಬೇಸರ ಪಡಬೇಡಿ, ಸ್ವಾಮಿ.

ತ್ಯಾಗ ಸೇವೆ ಧ್ಯೇಯಗಳುಳ್ಳ
ನಿಮ್ಮ ಸೇವಕ
× × ×

(೧೩)

ಕರ್ನಾಟಕದಲ್ಲೊಂದೂರು
ತೇ|| ಎರಡು ದಿನಗಳ ನಂತರ

ಅಪ್ರತಿಮ ಸಾಹಿತ್ಯ ಶಿರೋಮಣಿಗಳಾದ...........ರಿಗೆ,

ಕಾರಿದ್ದ ಕನ್ನಡಿಗರು ನಮ್ಮೂರಲ್ಲಿ ಒಬ್ಬಿಬ್ಬರಿದ್ದಾರ. ಅವರಿಂದ ನಾಡಹಬ್ಬದ ಚಂದಾ ವಸೂಲು ಮಾಡುವದು ನಕ್ಷತ್ರಕನಿಂದಲೂ ಆಗಿಲ್ಲ. ಆದರೆ ನಿಮ್ಮ ಭಾಷಣದದಿನ ಅವರನ್ನೇ ಸಭೆಗೆ ಅಧ್ಯಕ್ಷರನ್ನಾಗಿ ಮಾಡಿಬಿಟ್ಟರೆ, ಅವರ ಕಾರೂ ದೊರೆಯಬಹುದು. ಹಂಪೆಗೆ ಹೋಗಲು ಅನುಕೂಲವಾಗುತ್ತದೆ.

ಭಾಷಣದ ವಿಷಯವನ್ನಿಷ್ಟು ತೀವ್ರ ತಿಳಿಸಿದರೆ, ತಮ್ಮ ಭಾಷಣವನ್ನು ಯಾರಿಂದಾದರೂ ಬರೆಯಿಸಿಕೊಳ್ಳಲು ಅಧ್ಯಕ್ಷರಿಗೂ ಸಮಯವಿರುತ್ತದಲ್ಲವೆ? ಉತ್ತರವು ಬೇಗ ಬರುವದೆಂದು ಆಶಿಸುತ್ತೇನೆ.

ತಮ್ಮಿಂದ ಜ್ಞಾನೋದಯವನ್ನು ಬಯಸುವ
× × × ×
ಕಾರ್ಯದರ್ಶಿ, ನಾಡಹಬ್ಬ ಸಮಿತಿ

(೧೪)

ಕನ್ನಡ ಭಾಷಣಕಾರರೂರು

ತೇ|| ಎರಡು ದಿನಗಳನಂತರ

ಮಹಾಸ್ವಾಮೀ,

ನಿಮ್ಮೂರಿಗೆ ನಡೆದು ಬರಲು ಸಹ ಸಿದ್ಧನಿದ್ದೇನೆ ಸ್ವಾಮಿ, ನಾನು. ನನಗೂ ನಿಮ್ಮೂರಿಗೂ ಅಂತಹ ನಿಕಟ ಸಂಬಂಧ ಇದೆ ನೋಡಿ. ಏಕೆ ಅನ್ನಿ. ನನ್ನ ಮನೆಯವಳ ಅಜ್ಜಿ ಮಿರ್ಜಿಯಿಂದ ಶಸ್ತ್ರಕ್ರಿಯೆ ಮುಗಿಸಿಕೊಂಡು ನಮ್ಮೂರಿಗೆ ಮರಳಿ ಬರುವಾಗ, ನಿಮ್ಮೂರಿನ ರೈಲ್ವೆ ನಿಲ್ದಾಣವನ್ನು ಮುಟ್ಟಿದ ಕೂಡಲೆ ಮೃತರಾದರಂತೆ. ನನ್ನ ಹೆಂಡತಿಗೆ ಅವಳ ತಾಯಿ ಹೇಳುತ್ತಿದ್ದರಂತೆ. ಹೆಂಗರುಳು ನೋಡಿ! ನಿಮ್ಮೂರಿನ ಹೆಸರೆತ್ತಿದಕೂಡಲೆ—ತಾನು ಆ ಅಜ್ಜಿಯನ್ನು ನೋಡದಿದ್ದರೂ ಸಹ—ಅವರ ನೆನಪು ಮಾಡಿಕೊಂಡು, ನನ್ನ ಮನೆಯವಳು ಬಿಕ್ಕಿ ಬಿಕ್ಕಿ ಅಳುತ್ತಿದ್ದಾಳೆ. ಕಂಬನಿ ಸುರಿಸಿ, ನನ್ನೊಡನೆ ಬಂದೇ ತೀರುತ್ತೇನೆಂದು ಮುಷ್ಕರ ಹಿಡಿದಿದ್ದಾಳೆ. ಈ ಸ್ಥಿತಿಯಲ್ಲಿ, ಇರುವ ಒಬ್ಬಳೇ ಹೆಂಡತಿಯನ್ನು ಏಕಾಂಗಿಯಾಗಿ ಬಿಟ್ಟು ಬರಲು ಮನಸ್ಸಾದರೂ ಹೇಗೆ ಒಪ್ಪಬೇಕು? ಬಿಟ್ಟು ಬಂದರೆ ನೀವಾದರೂ ಏನೆಂದೀರಿ? ಅಂದಮೇಲೆ ಅವಳನ್ನೂ ನನ್ನೊಡನೆ ಕರೆತರಬೇಕು ಎಂದಂತಾಯಿತಲ್ಲವೆ? ತಪ್ಪದೆ ಕರೆತರುತ್ತೇನೆ; ನೀವು ಹಣದ ಮುಖ ನೋಡುವವರಲ್ಲ ಎಂಬುದು ನನಗೆ ಗೊತ್ತು ಕಣ್ರೀ.

ಸ್ವಾರ್ಥತ್ಯಾಗ ಮತ್ತು ಸೇವೆಗಳಿಗಾಗಿ
ಜೀವನವನ್ನೇ ಮುಡಿಪು ಇಟ್ಟಿರುವ
ನಿಮ್ಮೆಲ್ಲರ ಅಡಿಯಾಳು
× × × ×

(೧೫)

ಕರ್ನಾಟಕದಲ್ಲೊಂದೂರು
ತೇ|| ಎರಡು ದಿನಗಳ ನಂತರ

ವಿದ್ವತ್ಫಣಿ ಭೂಷಣರೇ,

ಸಪ್ರೇಮ ವಂದನೆಗಳು. ನೀವು, ನಿಮ್ಮ ಒಬ್ಬಳೇ ಹೆಂಡತಿ, ಕುವರಿ, ಅರ್ಧ ಟಿಕೀಟಿನ ಕುಮಾರನೊಂದಿಗೆ ಸುತ್ತು ಮಾರ್ಗವಾದ ........ಜಂಕ್‌ಷನ್ ಮೇಲಿಂದ ನಮ್ಮೂರಿಗೆ ಎರಡನೆ ವರ್ಗದಲ್ಲಿ ಬಂದು, ಅದೇ ಸುತ್ತು ಹಾದಿಯಿಂದ ಮರಳಿ ಹೋಗುವಿರಿ. ಎಲ್ಲರ ಈ ಪ್ರವಾಸದ ಕರ್ಚನ್ನೂ ಕೂಲಿ, ದ್ರಾಕ್ಷಿ, ದಾಳಿಂಬ ಮುಂತಾದ ಚಿಲ್ಲರೆ ಕರ್ಚಿಗಾಗಿಯೂ ನಾವು........ರೂಪಾಯಿಗಳನ್ನು ಕೊಡುತ್ತೇವೆ. ಅಧ್ಯಕ್ಷರ ಕಾರಿನಲ್ಲಿ ಹಂಪೆಯನ್ನೂ ಸುತ್ತುತ್ತೀರಿ. ನಿಮ್ಮ ಭಾಷಣ...........ನೇ ತೇದಿ. ಅದೆಲ್ಲವೂ ಆಯಿತು.

ಭಾಷಣದ ವಿಷಯವನ್ನಿಷ್ಟು ತಿಳಿಸಿಬಿಟ್ಟರೆ ಮಹದುಪಕಾರ ಮಾಡಿದಂತಾಗುವುದು.

ನಿಮ್ಮ ಜ್ಞಾನಾಮೃತಕ್ಕಾಗಿ
ಬಾಯಾರಿಕೆಯಾಗಿರುವ
× × × ×
ಕಾರ್ಯದರ್ಶಿ, ನಾಡಹಬ್ಬ ಸಮಿತಿ

(೧೬)

... ...............ನವರೆ,

ತಕ್ಷಣ ಸಂಪೂರ್ಣ ಹಣವನ್ನು ತಂತಿ ಮನಿಯಾರ್ಡರು ಮಾಡಿಬಿಡಿ, ತಾರು ಜವಾನನಿಗೆ ಕೊಡಬೇಕಾಗುವ ಬಕ್ಸೀಸಿನ ನಾಲ್ಕಾಣೆಯನ್ನೂ ಸೇರಿಸಿ. ಇಲ್ಲದಿದ್ದಲ್ಲಿ ನಾನು ಹೊರಡುವದು ಆಗದಮಾತು.

ನನ್ನ ಭಾಷಣದ ವಿಷಯ:— "ನಮ್ಮ ಆರ್ಥಿಕ ದುಸ್ಥಿತಿ"

ಸೇವಾರತ್ನಾಕರ ಧುರೀಣ.

(೧೭)

ಕರ್ನಾಟಕದಲ್ಲೊಂದೂರು
ತೀ॥ ಎರಡು ದಿನಗಳನಂತರ

ಮಾನ್ಯರೆ,

ತಾವು ದಯವಿಟ್ಟು ಹೊರಡಬೇಡಿ; ತಮ್ಮ ಭಾಷಣದ ಕಾರ್ಯಕ್ರಮವನ್ನು ರದ್ದುಗೊಳಿಸಲಾಗಿದೆ.

ಇದಕ್ಕೆ ಕಾರಣ "ನಮ್ಮ ಆರ್ಥಿಕ ದುಸ್ಥಿತಿ"

ತಮ್ಮ ಭಾಷಣಾಮೃತವನ್ನು ಸವಿಯಲು
ಪುಣ್ಯವಿಲ್ಲದ ನಿರ್ಭಾಗ್ಯ
ಕಾರ್ಯದರ್ಶಿ



# ಸ್ವಂತ ಸುಳ್ಳು ಸುದ್ದಿಗಾರರು

"ನಾನು ಹಾಗೆ ಹೇಳಲೇ ಇಲ್ಲ, ಹೀಗೆ ಮಾತ್ರ ಹೇಳಿದ್ದೆ. ಹೀಗಿದ್ದುದರ ಅರ್ಥವನ್ನು ಸುದ್ದಿಗಾರರು ಹಾಗೆ ತಿರುಚಿದ್ದಾರೆ. ಇದು ಸರಿಯಲ್ಲ" ಎಂದು ಅನೇಕ ಮುಖಂಡರು ಅನೇಕ ಬಾರಿ ಹೇಳಿ ಸುದ್ದಿಗಾರರ ಮೇಲೆ ದೂರು ಕೊಟ್ಟಿದ್ದಾರೆ. ತಮಗೆ ಅವಶ್ಯವೆನಿಸಿದಾಗೆಲ್ಲ ಇಂತಹ ಹೇಳಿಕೆಯನ್ನು ಕೊಟ್ಟು ಹೊಣೆಯ ಹೊರೆಯಿಂದ ಪಾರಾಗಿರಲೂ ಸಾಕು. ನಾನು ಹಾಗನ್ನಲಿಲ್ಲ ಎಂದು ಹಾಗಂದವರು ಅಂದಾಗ ಸುಳ್ಳರಾಗುವ ಪಾಳಿ ಸುದ್ದಿಗಾರರದೆ! ಏಕೆಂದರೆ ಅವರು ಮಾಡಿದ ಭಾಷಣವು ರೂಪಾಯಿಯಲ್ಲಿ ಹದಿನೇಳಾಣೆ ಪಾಲು ಎಂದೂ ಎಲ್ಲಿಯೂ ಮೂಡದೆ ಯಾರ ತಲೆ ಮನ ಹೃದಯಗಳಿಗೆ ತಾಗದೆ ಗಾಳಿಯಲ್ಲಿ ತೇಲಿ ಗಗನದ ಆ ಬದಿ ಹೋಗುವದುಂಟು. ಆಡಿದ ಮಾತಿಗೆಲ್ಲ ಆನೆ ಬಿಲ್ಲೆ ಹಚ್ಚಿ ಸಹಿಮಾಡಿ ಅವರೂ ಕೊಡಲು ಸಾಧ್ಯವಿಲ್ಲ; ಭಾಷಣಾಮೃತವನ್ನು ಸವಿಯುವಾಗಲೇ ಮೂರ್ಛೆ ಹೋಗುತ್ತಿರುವ ಸುದ್ದಿಗಾರರಿಗೆ ಸಹಿ ತೆಗೆದುಕೊಳ್ಳಲು ಸಮಯವೂ ಇಲ್ಲ. ಆಡಿದವರು ಆಡಿಲ್ಲವೆಂದ ಮೇಲೆ ಅಲ್ಲಿಗೆ ಮುಗಿಯಲೇಬೇಕು ಆ ಕತೆ: ಆಡಿಲ್ಲವೆಂಬುದರಲ್ಲಿ ಆಡಿದ್ದರೆ ತಪ್ಪಾಯಿತು ಎಂಬ ದನಿ ಇದೆ. ಸುದ್ದಿಗಾರರ ಸುಖವು ಹೇಳ ತೀರದು, ಸುಳ್ಳು ಶೂರರ ಕೈಯಲ್ಲಿ ಸಿಕ್ಕಾಗ.

ಎಂಬತ್ತಾರು

ಹೊಸಯ ಅಥವಾ ಹಿರಿಯ ಭಾಷಣಕಾರರ ಪೂರುಷೀಗೆ; ಭಾಷಣಗಳನ್ನುಮಾಡಿ ಪತ್ರಿಕೆಯಲ್ಲಿ ಮೂಡಿಯೇ ಬೆಳಕಿಗೆ ಬರುವ ಹುಚ್ಚು ಹಿಡಿದ ಅಮೆಚೂರ್ ಮುಖಂಡಮಾರಿಗಳದು ಇನ್ನೊಂದು ಬಗೆ. "ನನ್ನ ಭಾಷಣವೇ ಬರಲಿಲ್ಲ ನಿಮ್ಮ ಪತ್ರಿಕೆಯಲ್ಲಿ, ಬರೀ ಮುಂತಾದವರು ಮಾತನಾಡಿದನಂತರ ಜನಗಣಮನದೊಂದಿಗೆ ಸಭೆ ಮುಗಿಯಿತು' ಎಂದಿಷ್ಟೆ ಬಂದಿವೆ" ಎಂದು ಮುಖ ಕೆಳಗೆ ಹಾಕಿ ಮನೋರೋಗದಿಂದ ಕೊರಗಿ ಕೊರಗಿ ಸಿಪ್ಪೆಯಾಗುವುದು ಇವರ ಪ್ರಾರಬ್ಧ! ಕಡೆಗೆ ಕೋಪ ಬಂದು ಪತ್ರಿಕೆಯನ್ನು ಓದುವುದನ್ನು (ಕೊಳ್ಳುವ ಅಭ್ಯಾಸವೆಂದೂ ಇಲ್ಲ) ಬಿಟ್ಟರೂ ಆಶ್ಚರ್ಯವಿಲ್ಲ. ಹಲವರಿಗೆ ಜಪತಪಗಳೇ ಮೋಕ್ಷ ಸಾಧನ, ಕೆಲವರಿಗೆ ವೇದಿಕೆ ಪತ್ರಿಕೆಗಳೇ ಸಾಕ್ಷಾತ್ ಮೋಕ್ಷ! ಇವರ ಹೆಸರು, ಸಾಧ್ಯವಿದ್ದರೆ ಇವರ (ಅಯ್ಯೋ! ಆ) ಮುಖ ಪತ್ರಿಕೆಯಲ್ಲಿ ಬಂದು ಬಿಟ್ಟರೆ ಇವರಿಗೆ ಸದ್ಗತಿ ಸಿಕ್ಕಂತೆಯೇ. ಇವರ ಜನ್ಮವು ಸಾರ್ಥಕವಾಯಿತು, ಭೂಲೋಕದ ವಾಸನ ಮುಗಿಯಿತು, ಇವರಿನ್ನು ಹೋಲ್ಡಾಲ್ ಬಿಗಿದು ಹೊರಡಬಹುದು ಪರಂಧಾಮಕ್ಕೆ. ಇಂತಹರ ಕಂಣಿಗೆ ಸುದ್ದಿಗಾರರು ಅಷ್ಟದಿಕ್ಪಾಲಕರಂತೆ. ಸುದ್ದಿಗಾರರಿಗೆ ಇಂತಹರು ಸಿಕ್ಕರೆ ಇಂದಿನ ಕಾಲದಲ್ಲೂ ಹೊಟ್ಟೆತುಂಬ ಅನ್ನ ದೊರೆತಂತೆ. ಇವೆಲ್ಲಕ್ಕೂ ಒಂದೇ ಮೂಲ ರೋಗ.–ಮೇಲೆ ನಿಂತು ಮಾತನಾಡುವವರು ಕೆಳಗೆ ಕುಳಿತು ಕೇಳುವವರಕಿಂತಲೂ ಹೆಚ್ಚು ದಡ್ಡರಲ್ಲ ಎಂಬ ತಪ್ಪು ಕಲ್ಪನೆ. ಮಾತನಾಡುವವರ ಪರೀಕ್ಷೆಯನ್ನು ಕೇಳುವವರು ತೆಗೆದು ಕೊಳ್ಳುತ್ತಿದ್ದಾರೆ ಎಂಬುದು ಹೊಳೆದರೆ ಅನೇಕರಿಗೆ ಈ ವೇದಿಕೆಯಹುಚ್ಚು ಕಡಿಮೆಯಾಗಬಹುದು.

ಭಾಷಣವನ್ನೇರ್ಪಡಿಸಿದ ಜಂಟಿಕಾರ್ಯದರ್ಶಿಗಳು ಮೆತ್ತಗೆ ಜಾರಿಕೊಳ್ಳಬಲ್ಲರು. ಬೇಸರವಾದರೆ ಬೇಕಾದವರು—ಸಿಗರೇಟು ಬೀಡಿ ಬೇಕಾದವರು–ಒಬ್ಬೊಬ್ಬರೆ ಎದ್ದು ಎಲ್ಲರೂ ಪಾರಾಗುತ್ತಾರೆ. ದರುಭ್ಯಾಸವಿಲ್ಲದ ಮುಗ್ಧೆವಿಗಳು ಕೆಮ್ಮುತ್ತ ಕುಳಿತಾದರೂ ಬದುಕಿಕೊಳ್ಳ

ಬಹುದು. ಪ್ರತ್ಯೇಕ ಸ್ಥಳದಲ್ಲಿ ಕುಳಿತ ಪುತ್ರವತೀ ಕುಲೀನಸ್ತ್ರೀಯರಿಗಂತೂ ಅತಿಸುಲಭ ಮಾರ್ಗವಿದೆ. ತಮ್ಮ ಮಗುವನ್ನು ಅಳಿಸಲು ತಮಗೇ ಗೊತ್ತಿಲ್ಲವೆ? ಈ ಪುಣ್ಯವು ಸುದ್ದಿಗಾರನಿಗಿದೆಯೇ? ಬೇಕಾಗಲಿ ಬೇಡಾಗಲಿ ಸುಪ್ರಸಿದ್ಧ ಭಾಷಣಕಾರರ ಉದ್ದ ಉಪನ್ಯಾಸವನ್ನು—ವ್ಯಾಕರಣ ಮತ್ತೂ, ಸ್ಪೆಲಿಂಗ್ ತಪ್ಪುಗಳ ಸಮೇತ—ಕೇಳಲೇಬೇಕು, ಬರೆದು ಕೊಳ್ಳಲೂಬೇಕು. ಆದರೆ ಅಲ್ಲಿಗೇ ಮುಗಿಯಲಿಲ್ಲ ಅವನಗೋಳು. ಇದ್ದುದನ್ನು ಇದ್ದಂತೆ ಬರೆದು ಕಳಿಸುವದಂತೂ ಸಾಧ್ಯವೇ ಇಲ್ಲ. ಹೇಳಿದ್ದನೆಲ್ಲ ಕೇಳಲಾರದೆ ಎಲ್ಲರೂ ಎದ್ದು ಹೋದಂತೆ ಅಚ್ಚಾದುದನ್ನೆಲ್ಲ ಓದಲಾರದೆ ಎಲ್ಲರೂ ಪತ್ರಿಕೆಯನ್ನು ಬಿಸುಟುವರೆಂಬ ಭಯ ಬೇರೆ. ಅಲ್ಲದೆ ಮೇಲೊಬ್ಬರು ಕುಳಿತೇ ಇರುತ್ತಾರಲ್ಲ, ಖಡ್ಗವನ್ನು ಹಿಡಿದು ಕೋಣನ ಮೇಲೆ ಕುಳಿತ ಯಮನಂತೆ, ಕತ್ತರಿಯನ್ನು ಹಿಡಿದು ಕುರ್ಚಿಯ ಮೇಲೆ ಕುಳಿತ ಸಂಪಾದಕ ಮಹರಾಯರು! ಭಾಷಣಕಾರರು ಕೊಟ್ಟ ಡಿಕ್ಟೇಶನ್ ಬರೆದುಕೊಂಡು ಅವರ ವ್ಯಾಕರಣದ ತಪ್ಪುಗಳನ್ನು ತಿದ್ದಿ ತನ್ನ ಸ್ವಂತ ಸ್ಪೆಲಿಂಗ್ ತಪ್ಪುಗಳನ್ನು ಗೆದ್ದು, ಓದುಗರಿಗೆ ಏನೂ ಅರ್ಥವಾಗದಷ್ಟು ಜಾಣ್ಮೆಯಿಂದ ಕತ್ತರಿ ಹಾಕಬಲ್ಲ ಸಂಪಾದಕರಾಯನಿಗೂ ಬಾಗಿ ಬಾಳಬೇಕು ಸುದ್ದಿಗಾರ—ಇವನು ಸ್ವತಂತ್ರ ಸುದ್ದಿಗಾರ! ಬೆನ್ನು ಹತ್ತಿ ತಮ್ಮ ಸಭೆಗಳಿಗೆ ಔತಣವಿತ್ತು ಅವರು ಬಾರದಿದ್ದರೆ ಕುಪಿತರಾಗುವವರು ಎಲ್ಲಿಯೋ ನೂರಕ್ಕೊಬ್ಬರು. ಸುದ್ದಿಗಾರರ ಪ್ರಚಾರಬಲದಿಂದ ಕೊಂಚ ಹೊರಬಂದು ಹಲವರ ಕಂಣಿಗೆ ಬಿದ್ದನಂತರ ಈ ಸಭೆಕರೆಯುವ ಜಾತಿಯವರೇ 'ಸುದ್ದಿಗಾರರಿಗೆ ಪ್ರವೇಶವಿಲ್ಲ' ವೆಂಬ ಜಂಬದ ಬೋರ್ಡು ಹಾಕಲೂ ಬರುತ್ತದೆ. ಬಾಯಿಜಾರಿ ಆಡಿದ ಮಾತುಗಳು ಸುದ್ದಿಗಾರರಿಗೆ ಸಂಬಂಧವಿಲ್ಲವೆಂದು ಹೇಳಿಕೊಂಡ ಉತ್ತರಭೂಪರೂ ಇದ್ದಾರೆ.

ಸುದ್ದಿಗಾರರಲ್ಲಿಯೂ ಇನ್ನೊಂದು ಜಾತಿ. ಹೇಳಿದ್ದನ್ನಷ್ಟೆ ಕೇಳಿ

ಹೋದರೆ ತಮ್ಮ ಕಸುಬಲ್ಲವೆಂದು ಏನೆಲ್ಲವನ್ನು ಕೇಳಿ ದೊಡ್ಡವರ ಬಾಯಿಂದ ದಡ್ಡ ಮಾತುಗಳನ್ನು ಆಡಿಸಿ ತಂಟೆ ತಂದಿಡುತ್ತಾರೆಂಬುದು ಹಲವರಿಗೆ ಸಿಂಹ ಸ್ವಪ್ನ. ಸುದ್ದಿಗಾರರಗೆ ಮುಖತೋರಿಸುವದಿಲ್ಲವೆಂದು ಸಾರಿ ಹೇಳಿ ಹೈದರಾಬಾದ ನಿಜಾಮರು ಹಿಂದೊಮ್ಮೆ ಘೋಷೆಯಲ್ಲಿ ಕುಳಿತಿರಲಿಲ್ಲವೆ ? ಎಲ್ಲ ಕನ್ನಡಿಗರ ಕಂಣುಗಳೂ ಅಂದೊಮ್ಮೆ ದಿಲ್ಲಿಯ ಕಡೆ ನೋಡುತ್ತಿದ್ದಾಗ 'ತೊಟ್ಟಬಾಣವನ್ನು ತೂಡುವದಿಲ್ಲ' ಎಂದು ಭಾನಗೇಡಿ ಕರ್ಣನಂತೆ "ಸತ್ಯಾಗ್ರಹದ ಪ್ರಶ್ನೆಯೇ ಇಲ್ಲ" ಎಂದು ಅಧ್ಯಕ್ಷರ ಬಾಯಿಂದ ಆಡಿಸಿದ ಧವಳ ಕೀರ್ತಿಯು ಒಬ್ಬ ಸುದ್ದಿಗಾರನಿಗೇ ಸಲ್ಲಿತು. ಅಂದು ಒಡೆದ ಮುತ್ತಿನ ರಿಪೇರಿ ಇನ್ನೂ ನಡದೇ ಇದೆ! ಆಡಿದ್ದನ್ನೆಲ್ಲ ಮೂಡಿಸಿದರೆ ಅನಾಹುತವಾದೀತೆಂದು ಏಕೆ ತೋಚದೋ ಈ ಸುದ್ದಿಗಾರರಿಗೆ !

ಇಷ್ಟೆಲ್ಲ ಬೈಗಳಿಗೆ ಭಾಗಿಯಾದ ಸುದ್ದಿಗಾರರ ಕಸುಬಿಗೆ ನಾನೂ ಕೈ ಹಾಕಿದೆ. ಪ್ರಾಮಾಣಿಕತೆಯನ್ನು ಇವರಿಗೆ ಕಲಿಸಲು ಹಟತೊಟ್ಟು ಕಾಗದ ಸೀಸಕಡ್ಡಿಯೊಂದಿಗೆ ಸನ್ನದ್ಧನಾದೆ ಒಂದು ಸಭೆಯಲ್ಲಿ. ಮಹಾತ್ಮರ ನೆನಪುಕೊಟ್ಟು ಅವರ ಜೀವನದ ಧ್ಯೇಯಗಳನ್ನು ಜನತೆಗೆ ತಿಳಿಸುವ ಮಹಾಕಾರ್ಯವನ್ನು ನಮ್ಮ ಮುಂಬಾಲಿಗರು ಮಾಡುವರೆಂಬಾಸೆ ನನಗೂ. ಮುಂದೆ ಕುಳಿತ ನನಗೆ ಮೈ ಬೆವರೊಡೆಯಿತು ಭಾಷಣವನ್ನು ಕೇಳಿ. ಪೂಜ್ಯ ಬಾಪೂಜೀಯವರು ಜನ್ಮವೆತ್ತಿದ ದಿನಾಂಕವೊಂದನ್ನಷ್ಟು ಹೇಳಿ ಏಕ್ದಂ ಗೋಡ್ಸೇ ಆಯಣಕ್ಕೇ ಕೈ ಹಚ್ಚಿ ಎರಡು ಗಂಟೆಕಾಲ ಅವನನ್ನು ಬಾರಿಸಿ ಕೈ ಬಿಟ್ಟರು. ಕೂಡುವ ಮುನ್ನೆ ಕಡೆಗೊಂದು ಧೀರವಾಣಿ ಹೊರಟಿತು, ಆ ಅಹಿಂಸಾದೂತರ ಮುಖದಿಂದ. "ನಮ್ಮ ಶತ್ರುಗಳಾದ ಗಾಂಧೀದ್ರೋಹಿಗಳ ತಲೆಯೊಡೆದು ರಕ್ತವನ್ನು ಸುರಿಸದಿದ್ದರೆ ನಾನು ಗಾಂಧಿಯಾಣೆಯಾಗಿಯೂ ಅವರ ಭಕ್ತನೇ ಅಲ್ಲ' ಎಂದು ಸ್ಫೂರ್ತಿಯಿಂದ ಹೇಳಿ ಕುಳಿತಾಗ ಇಡೀ ಸಭೆಯು ಕರತಾಡನ ಮಾಡಿತು, ಹರ್ಷೋದ್ಗಾರ ಮಾಡಿತು,

'ಹಿಯರ್ ಹಿಯರ್' ಎಂದು ಕೂಗಿತು. ಎಲ್ಲರೊಂದಿಗೆ ನಾನೂ ಕಿವಿ ಜಾಡಿಸಿ ಎದ್ದು ಮನೆಗೆ ಬಂದು ಮೂರು ಸಾಲಿನ ವರದಿಯನ್ನು ಬರೆಯಲು ಮೂರು ತಾಸು ಯೋಚಿಸಿದೆ. "ಕಾರ್ಯದರ್ಶಿಗಳು ಗಾಂಧೀತತ್ವಗಳನ್ನೂ ಎತ್ತಿಹೇಳಿ ಅಹಿಂಸಾ ಮಾರ್ಗವನ್ನು ಉಪದೇಶ ಮಾಡಿದರು" ಎಂದು ನಾನು ಕಳುಹಿದ ಸುಳ್ಳು ಸುದ್ದಿಯು ದೊಡ್ಡಕ್ಷರ ಗಳಲ್ಲಿ ಬಂದಾಗ ಕಾರ್ಯದರ್ಶಿಗಳ ಆನಂದವು ಅಪರಿಮಿತವಾಯಿತು. "ಹೇಗಿದೆ ನೋಡು ನನ್ನ ಭಾಷಣ"ವೆಂದು ತೋರಿಸಿ ಬೆನ್ನು ಚಪ್ಪರಿಸಿ ಕೊಂಡು ಕಾಫೀ ಕುಡಿಸಿ ಕೈ ಬಿಟ್ಟರು.

ತಾವು ಮಾಡಿದ ಭಾಷಣವು ಆಡಿದಂತೆ ಪತ್ರಿಕೆಯಲ್ಲಿ ಮೂಡಿಲ್ಲ ವೆಂದು ಕಿಡಿಕಿಡಿಯಾಗಿದ್ದರು ಓರ್ವ ರಾಜಕಾರಣ ಪಟುಗಳು. ಅಂದಿ ನಿಂದಂತೂ ಅವರು ವೇದಿಕೆಗೆ ಬಂದಾಗಲೆಲ್ಲ ಸುದ್ದಿಗಾರರಿಗೆ ನಡುಕವೇ ಹುಟ್ಟುತ್ತಿದ್ದಿತು. ಅಂಜದೆ ಅಳುಕದೆ ಆತು ಕುಳಿತು ಇದ್ದುದನ್ನು ಇದ್ದಂತೆ ವರದಿ ಮಾಡಲು ಸಿದ್ಧನಾಗಿ ಆ ಪಟುಗಳ ವಾಕ್ಯಾಮೃತವನ್ನು ಶೀಘ್ರ ಲಿಪಿಯಲ್ಲಿ ಬರೆದು ಮುಗಿಸಿದೆ. ಚಾಚೂ ಬಿಡದೆ ರಂಜಿ ಕಾಳಷ್ಟೂ ಸೇರಿಸದೆ ಅವರ ಭಾಷಣದ ಚಿತ್ರವನ್ನು ಇಲ್ಲಿ ಇಳಿಸಿದ್ದೇನೆ. ಅವರೇ ಓದಿ ಸರಿಯಾಗಿದೆ ಎಂದೂ ಹೇಳಿದ್ದಾರೆ.

ಅಧ್ಯಕ್ಷರೆ ಮತ್ತು ಸಭಿಕರೆ,

ಘ್ರ ಘ್ರ ಇದು ಮಾತನಾಡಲು ಸಮಯವಲ್ಲ. ಮಾತನಾಡುವ ಅವಶ್ಯಕತೆಯೂ ಇಲ್ಲ. ಮಾತನಾಡಬೇಕಾದ ಅವಸರವೂ ಇಲ್ಲ. ಈಗ ಮಾತನಾಡುವದು ಶುದ್ಧ ತಪ್ಪಾದೀತು. ದೀರ್ಘಭಾಷಣವನ್ನು ಮಾಡುವ ಚಟವು ನನ್ನದಲ್ಲ, ಹಟವು ನನ್ನಗಿಲ್ಲ. ಕಾರಣ ಎರಡೇ, ಎರಡೆಂದರೆ ಎರಡೇ ಮಾತುಗಳನ್ನು, ಈಗಲೇ ಹೇಳಿ ಮುಗಿಸಿಬಿಡುತ್ತೇನೆ. ಏಕೆಂದರೆ ಸುಮ್ಮನೆ ಬೆಳೆಸುವದರಲ್ಲಿ ಏನೂ ಅರ್ಥವಿಲ್ಲ. ಅರ್ಥವಿಲ್ಲವಷ್ಟೇ ಅಲ್ಲ, ಅದರಿಂದಾವ ಒಳ್ಳೆಯ ಪರಿಣಾಮವೂ ಆಗದು. ಅಷ್ಟೇ ಅಲ್ಲ, ಕೆಟ್ಟ ಪರಿಣಾಮವೂ ಆಗಲು ಸಾಕು ಎಂದು ನನಗನಿಸುತ್ತಿದೆ. ಹೀಗೆ

ನನ್ನ ನಂಬಿಕೆ ಇದೆ, ನನ್ನ ವಿಶ್ವಾಸವಿದೆ, ನನ್ನ ಭಾವನೆ ಇದೆ, ನನ್ನ ಕಲ್ಪನೆ ಇದೆ. ನನ್ನ ಅಭಿಪ್ರಾಯವಿದೆ. ನನ್ನ ತಿಳುವಳಿಕೆ ಇದೆ. ನನ್ನ ಹೇಳಿಕೆ ಇದೆ. ಕಾರಣ ಬಹಳ ಮಾತುಗಳನ್ನಾಡುವದು ಬೇಡ. ನಾನು ಆಡುವದಿಲ್ಲ. ಆಡಲು ಇಚ್ಛಿಸುವದಿಲ್ಲ. ಬಯಸುವದಿಲ್ಲ. ಆಡುವ ಆಶೆ ನನಗಿಲ್ಲ. ಆಡುವ ಅವಶ್ಯಕತೆ ಇಲ್ಲ. ಅವಸರವಿಲ್ಲ. ಅಭಿಪ್ರಾಯ ವಿಲ್ಲ. ಆಕಾಂಕ್ಷೆ ಇಲ್ಲ. ಅದರಿಂದ ಉಪಯೋಗವಿಲ್ಲ. ಪ್ರಯೋಜನವೂ ಇಲ್ಲ. ಏಕೆಂದರೆ ಬರೀ ಮಾತಿನಲ್ಲಿ ಎಳ್ಳಷ್ಟೂ ಅರ್ಥವಿಲ್ಲ. ತಥ್ಯವಿಲ್ಲ. ಅರ್ಥಾತ್ ಅದು ನಿರರ್ಥಕವೇ ಆದೀತು. ಅದರಿಂದ ಯಾರಿಗೂ ಏನೂ ಎಷ್ಟು ಲಾಭವಾಗಲಾರದು. ಕಾರಣ ಕೆಲಸವಿಲ್ಲದೆ ಉಪ್ಪಕ್ಕೂ ಮಾತು ಗಳನ್ನು ಬೆಳೆಸಿ ಯಾರೂ ಎಂದೂ ಏನನ್ನೂ ಗಳಿಸಿಲ್ಲ, ಗಳಿಸುತ್ತಿಲ್ಲ, ಗಳಿಸುವದಿಲ್ಲ. ಗಳಿಸುವದು ಸಾಧ್ಯವಿಲ್ಲ. ಗಳಿಸುವದು ಅಸಾಧ್ಯ ದುಸ್ಸಾಧ್ಯ. ಒಂದು ವೇಳೆ ಹಾಗೆ ಗಳಿಸುತ್ತೇವೆಂದು ಯಾರಾದರೂ ತಿಳಿದಿದ್ದರೆ ಅದು ಅವರ ತಪ್ಪು ತಿಳುವಳಿಕೆ, ಅದು ಅವರ ದಡ್ಡತನವ ನ್ನಷ್ಟೇ ಎತ್ತಿ ತೋರುತ್ತದೆ. ಅಂದರೆ ಅದು ಅವರ ಜಾಣ್ಮೆಯ ಅಭಾವ ವನ್ನು ಮಾತ್ರ ಹಿಡಿದು ತಪ್ಪದೆ ತೋರಿಸೀತು. ಏಕೆಂದರೆ ಹಲವರಿಗೆ ಸಭೆ ಯಲ್ಲಿ ಮಾತನಾಡಲು ಅನುವು ದೊರೆತರೆ ಆಯಿತು, ಎಚ್ಚರವೇ ತಪ್ಪು ತ್ತದೆ. ಮಾತನ್ನೇ ಮರೆಯುತ್ತಾರೆ. ಪುನಃ ಪುನಃ ಅದನ್ನೇ ಆಡುತ್ತಾರೆ. ಮೇಲಿಂದ ಮೇಲೆ ಅದೇ ಮಾತನ್ನೇ ಆಡುತ್ತಿರುತ್ತಾರೆ. ಹಾಡಿದ್ದನ್ನೆ ಹಾಡುವದರಿಂದೇನು ಪ್ರಯೋಜನವಾದೀತು ? ಏನು ಉಪಯೋಗ ವಾದೀತು ? ವೇದಿಕೆಯ ಮೇಲೆ ನಿಂತರೆಂದರೆ ಅವರಿಗೆ ಅರಿವು ತಪ್ಪುತ್ತದೆ ಎಚ್ಚರವಿರುವದಿಲ್ಲ. ಜನರು ಬೇಸತ್ತಿದ್ದಾರೆಂಬುದನ್ನು ತಿಳಿಯುವ ಜಾಣ ತನ ಉಳ್ಳ ಭಾಷಣಕಾರರು ಬಹು ವಿರಳ. ಇದು ಬಹಳ ವಿಷಾದದ ಸಂಗತಿ. ದುಃಖದ ಮಾತು. ಅನವಶ್ಯಕವಾಗಿ, ಅಸಂದರ್ಭವಾಗಿ, ಅನುಪಯುಕ್ತವಾಗಿ ಉಪ್ಪಕ್ಕೂ ಮಾತನಾಡುವದು ಸರಿಯಲ್ಲ. ಒಳ್ಳೆಯ ದಲ್ಲ, ಶ್ರೇಯಸ್ಕರವಲ್ಲ, ಶ್ರೇಷ್ಠವಲ್ಲ, ಹಿತವಲ್ಲ, ಜನರು ಕುಳಿತು ಕೇಳ

ಲಾರರು, ಸಹಿಸಲಾರರು, ಶಪಿಸದಿರರು, ಬೈಯದಿರರು, ಎದ್ದು ಹೋಗದಿರರು, ನಗದಿರರು, ಅಳದಿರರು, ಕೆಮ್ಮದಿರರು. ಈ ಸಭೆಯಲ್ಲಿ ಮಾತನಾಡುವದೇ ತಪ್ಪು. ಇಂತಹ ಸಭೆಗಳಲ್ಲಿ ಮಾತನಾಡುತ್ತ ನಿಂತರೆ ಎಲ್ಲರೂ ಸಿಟ್ಟಾಗಿ, ಕುಪಿತರಾಗಿ, ಬೇಸರಪಟ್ಟು, ಜುಗುಪ್ಸೆಯಿಂದ. ಕೇಳಲಾರದೆ, ಕುಳಿತು ಕೊಳ್ಳಲಾರದೆ, ಸಹಿಸಲಾರದೆ. ತಾಳಲಾರದೆ ಎದ್ದು ಹೋಗಬಹುದು. ಬಹುದೇಕೆ, ಹೋಗಿಯೆ ಹೋಗುತ್ತಾರೆ. ಹಾಗೆ ಹೋಗುವದೇ ಸರಿ. ಇಂತಹ ದುಃಖ ಸೂಚಕ ಸಭೆಗಳಲ್ಲಿ ಹನುಮನ ಬಾಲದಂತೆ ಬೆಳಿಸಿ ಬೆಳಿಸಿ, ಜಿರಿಸಿ ಜಿರಿಸಿ, ಜಗ್ಗಿ ಜಗ್ಗಿ, ಎಳೆದೆಳೆದು ಮಾತನಾಡುವವರು ಮೂರ್ಖರು. ಶುದ್ಧ ಮೂರ್ಖ ಶಿಖಾಮಣಿಗಳು. ಶುಂಠರು. ಹೆಡ್ಡರು. ದಡ್ಡರು. ಆದಕಾರಣ ನಾನು ಹೇಳಿಯೇ ತೀರಬೇಕಾದ ಎರಡೇ ಮಾತುಗಳನ್ನು ಹೇಳಿಬಿಟ್ಟು ಮುಗಿಸಲು ಕುತೂಹಲದಿಂದಿದ್ದೇನೆ, ಅವಸರ ಪಡುತ್ತಿದ್ದೇನೆ, ತವಕ ಪಡುತ್ತಿದ್ದೇನೆ ಆತುರನಾಗಿದ್ದೇನೆ. ಆದಕ್ಕಾಗಿ ಇಂದು ಮಾತುಗಳನ್ನು ಕಡಿಮೆ ಮಾಡಿದ್ದೇನೆ. ಹಲವಾರು ಮಾತುಗಳಲ್ಲಿ ಹೇಳಬಹುದಾದದ್ದನ್ನು, ನೂರೆಂಟು ರೀತಿಯಲ್ಲಿ ತಿಳಿಸಬಹುದಾದದ್ದನ್ನು, ಗುಡ್ಡದಂತಹ ದೊಡ್ಡ ದೊಡ್ಡ ವಿಚಾರ ವಿಷಯಗಳನ್ನು, ಹತ್ತೈದು ವಿವರಗಳೊಂದಿಗೆ ಒತ್ತಿ ಹೇಳತಕ್ಕದ್ದನ್ನು, ಗಂಟೆಗಟ್ಟಲೆ ತಿಳಿಸತಕ್ಕದ್ದನ್ನು, ಒಂದೇ ಗಳಿಗೆಯಲ್ಲ, ಎರಡೇ ಮಾತಿನಲ್ಲಿ ಸೂಕ್ಷ್ಮವಾಗಿ ತಿಳಿಸಿ ಹೇಳಿ ಕೆಲಸವನ್ನು ಮುಗಿಸಿ ಕೈ ಮುಗಿದು ಕುಳಿತು ಬಿಡಬೇಕೆಂದಿದ್ದೇನೆ.

ನನ್ನ ಭಾಷಣವನ್ನು ಮೇಲಿಂದಮೇಲೆ ಕೇಳುವ ಆಸೆ ನಿಮಗಿರಬಹುದು. ನನ್ನ ಭಾಷಣಕ್ಕಾಗಿ ನಿಮ್ಮ ತೆರೆಬಾಯಿ ನೀರೊಡೆದಿರಬಹುದು. ನಿಮ್ಮ ಕಿವಿಗಳು ಉದ್ದವಾಗಿರಬಹುದು, ನಿಮ್ಮ ಆತುರವು ಆನೆಯಷ್ಟು, ಗುಡ್ಡದಷ್ಟು, ಪರ್ವತದಷ್ಟು, ಹಿಮಾಲಯದಷ್ಟು, ಮೌಂಟ್ ಎವರೆಸ್ಟನಷ್ಟು, ಮುಗಿಲಷ್ಟು, ಗಗನದಷ್ಟು, ಕೈಲಾಸದಲ್ಲಿರುವ—ಅಲ್ಲ—ವೈಕುಂಠದಲ್ಲಿರುವ ಶ್ರೀ ಕೃಷ್ಣನ ಕಿರೀಟದ ತುದಿಯಷ್ಟು ಎತ್ತರ ವಿರಬ

ಹುದು. ನನ್ನ ಭಾಷಣವನ್ನು ಕೇಳಲು ನಿಮ್ಮ ಆಸೆಯು ಅಪರಿಮಿತವಿರಬಹುದು. ಗಂಗೆಯಷ್ಟು ಉದ್ದವಿರಬಹುದು, ಗಣೇಶನ ಹೊಟ್ಟೆಯಷ್ಟು ಮುಂಪೆ ಇರಬಹುದು, ಬ್ರಹ್ಮಪುತ್ರದಷ್ಟು ಅಗಲವಿರಬಹುದು, ಶಾಂತಿ ಮಹಾಸಾಗರದಷ್ಟು ಆಳವಿರಬಹುದು, ಸಹಾರಾ ಮರುಭೂಮಿಯಷ್ಟು ವಿಸ್ತಾರವಿರಬಹುದು, ಆದರೂ ನಾನು ಮಾತ್ರ ಈಗ ಮಾತನಾಡುವದು ಬೇಡ. ಏಕೆಂದರೆ ಬೇಡ. ಅದು ನನಗೆ ಇಷ್ಟವಿಲ್ಲ. ಭಾಷಣ ಮಾಡುವ ಮನಸ್ಸಿಲ್ಲ. ಇಚ್ಛೆ ನನಗಿಲ್ಲ. ಮಾತನಾಡುವದೇ ನನಗೆ ಬೇಡವಾಗಿದೆ. ಇದು ದುಃಖ ಸೂಚಕ ಸಭೆ: ನಮಗೆಲ್ಲರಿಗೂ ಈಗ ಅತೀವ ದುಃಖವಾಗಿದೆ. ವೇದನೆಯಾಗಿದೆ. ನೋವಾಗಿದೆ. ಸಂಕಟವಾಗಿದೆ. ಜುಗುಪ್ಸೆಯಾಗಿದೆ. ನಮಗೆ ಈಗ ದುಃಖವಾಗಿರುವದೇ ನಮ್ಮ ಅಸಂತೋಷಕ್ಕೆ ಕಾರಣ. ನಮಗೆ ಈಗ ಮನೋವೇದನೆಯಾಗಿರುವದೇ ನಮ್ಮ ಮನದ ನೋವಿಗೆ ಕಾರಣ. ನಾವೀಗ ಸಂಕಟದಲ್ಲಿ ಬಿದ್ದಿದ್ದೇವೆ. ದುಃಖದಲ್ಲಿ ದುಮುಕಿದ್ದೇವೆ. ಗೋಳಿನಲ್ಲಿ ಮುಳುಗಿದ್ದೇವೆ. ಇಂದು ಬಾಳು ಹೋಳಾಗಿದೆ, ಬಾಳು ಬೀಳಾಗಿದೆ, ಬಾಳು ಕಾಳಾಗಿದೆ, ಕರಾಳವಾಗಿದೆ, ಆಳಹೋಗಿದೆ, ತೋಳ ಬಾಗಿಲಿಗೆ ಬಂದಿದೆ, ಕಾರಣ ಮಾತುಗಳುಮಾತ್ರ ಈಗ ಬೇಡೇಬೇಡ. ಇಂದು ಮಾತ್ರ, ಈಗ ಮಾತ್ರ, ಈ ಸಭೆಯಲ್ಲಿ ಮಾತ್ರ, ಈ ಸಂದರ್ಭದಲ್ಲಿ ಮಾತ್ರ, ಈ ಸಮಯದಲ್ಲಿ ಮಾತ್ರ, ಈ ಸಮೂಹದಲ್ಲಿಮಾತ್ರ, ಈ ಸಾಯಂಕಾಲದಲ್ಲಿ ಮಾತ್ರ, ಈ ಸದ್ಯಕ್ಕೆ ಮಾತ್ರ ಮಾತು ಬೇಡ. ಎಷ್ಟೂ ಬೇಡ. ಅಷ್ಟೂ ಬೇಡ, ಇಷ್ಟೂ ಬೇಡ. ಅದು ಶ್ರಾಷ್ಯವಲ್ಲ, ಶ್ರಾವ್ಯವಲ್ಲ, ಶಿಸ್ತು ಅಲ್ಲ, ಸಂಯಮವಲ್ಲ, ಸಂಪನ್ನತೆ ಅಲ್ಲ, ಸಕಾರಣವಲ್ಲ, ಸಹಜವಲ್ಲ, ಸರಳವಲ್ಲ, ಸಂಬಂಧವಿಲ್ಲ, ಸಂತೋಷವಿಲ್ಲ, ಸಂಭ್ರಮವಿಲ್ಲ, ಸುಲಲಿತವಿಲ್ಲ, ಸೊನ್ನೆ ಇಲ್ಲ, ಸೂಕ್ಷ್ಮವಿಲ್ಲ. ಈಗ ಮಾತನಾಡುವದು ನನಗೇ ಸೇರದು. ನನಗೆ ಮಾತು ಬೇಕಿಲ್ಲ. ಮಾತು ಬೇಡ. ಆದ್ದರಿಂದ ನನ್ನನ್ನು ಕ್ಷಮಿಸಿ, ನಾನು ಮಾತನಾಡಲಾರೆ, ಮಾತನಾಡುವದಿಲ್ಲ. ಮಾತನಾಡಿಲ್ಲ.

( ಸಭೆಯಲ್ಲಿ ಗುಜುಗುಜು, ಕೆಮ್ಮು, ನಗು, ಇತ್ಯಾದಿ ಇತ್ಯಾದಿ. ಮುಂದೆ ಕುಳಿತವರು ಸೀನಿದರು. ಸುತ್ತುಮುತ್ತಿದ್ದವರು ಆಕಳಿಸಿ ಬಾಯಿಯ ಮುಂದೆ ಬೆರಳಿನಿಂದ ಚಿಟಿಕಿ ಹೊಡೆದರು. ಅದನ್ನೇ ಕರತಾಡನವೆಂದು ತಿಳಿದ ಭಾಷಣಕಾರರು ಕುಪಿತರಾದರು.) ನೀವು ಚಪ್ಪಾಳೆ ತಟ್ಟಕೂಡದು. ಕೈ ತಟ್ಟಬಾರದು. ಇದು ಸರಿಯಲ್ಲ, ಮರ್ಯಾದೆ ಅಲ್ಲ, ಗೌರವವಲ್ಲ, ಗಂಭೀರವಲ್ಲ, ನಮಗೀಗ ಏನಾಗಿದೆ ಬಲ್ಲಿರಾ? ಅತೀವ ದುಃಖ, ವ್ಯಸನ, ಅಸಂತೋಷವಾಗಿದೆ. ಚಿಂತೆ, ಆಲೋಚನೆ, ಕಷ್ಟ, ಕಾತರವಾಗಿದೆ. ದಾರಿ ಕಾಣದಾಗಿದೆ, ಹಾದಿ ತೋಚದಾಗಿದೆ, ಕತ್ತಲಾಗಿದೆ, ಬೆಳಕು ಹೋಗಿದೆ, ನಿದೆಯು ಬಂದಿದೆ, ಕಗ್ಗತ್ತಲು ಕವಿದಿದೆ, ಕಂಣು ಕಾಣದಾಗಿದೆ, ಕಾರಣ ನಾವೀಗ ನೋಡಲಾರೆವು. ಈಗ ಮಾತನಾಡುವದು ಬೇಡ. ಏಕೆಂದರೆ ಬೇಡ. ಆದ್ದರಿಂದ ಬೇಡ.

ನಾನು ಹೇಳಬೇಕೆಂದಿರುವ ಎರಡೇ ಮಾತುಗಳನ್ನು ಮಾತ್ರ ಹೇಳುತ್ತೇನೆ. ಆ ಮಾತುಗಳು ಯಾವೆಂಬುದನ್ನು ಈಗ ಹೇಳುತ್ತೇನೆ. ಈಗಲೇ ಹೇಳುತ್ತೇನೆ. ಕೂಡಲೆ ಹೇಳಿ ಬಿಡುತ್ತೇನೆ, ಕ್ಷಿಪ್ರದಲ್ಲಿಯೇ ಹೇಳುವವನಿದ್ದೇನೆ. ಶೀಘ್ರದಲ್ಲಿಯೇ ಹೇಳಿ ಬಿಡುವವನಿದ್ದೇನೆ. ಈ ಕ್ಷಣವೇ ಹೇಳಿ ಬಿಡುತ್ತೇನೆ, ಹೇಳಲೇ ಬೇಕಾಗಿದೆ. ಹೇಳದಿದ್ದರೆ ಗತ್ಯಂತರವಿಲ್ಲ. ಹೇಳುತ್ತೇನೆ ಕೇಳಿರಿ. ನಾನು ಹೇಳಬೇಕಾದುದೂ ಇಷ್ಟೇ, ನಾನು ಹೇಳುವದೂ ಇಷ್ಟೇ. ನನ್ನಿಂದ ಇಷ್ಟಕ್ಕಿಂತಲೂ ಹೆಚ್ಚು ಹೇಳುವದು ಸಾಧ್ಯವಿಲ್ಲ. ನೀವು ಬಯಸಬೇಡಿ, ಅಪೇಕ್ಷಿಸಬೇಡಿ, ಆಶಿಸಬೇಡಿ. ನಾನು ಮೊಟ್ಟಮೊದಲು ಒಂದು ಮಾತನ್ನು ಹೇಳಬೇಕಾಗಿದೆ. ಅದೇನೆಂದು ತಿಳಿಯಲು ನೀವು ಬಾಯಿಬಿಟ್ಟು, ಕಿವಿ ನಿಗುರಿಸಿ, ಕಂಣರಳಿಸಿ, ಕೈ ಮುಷ್ಟಿ ಹಿಡಿದು ಕುಳಿತಿದ್ದೀರಿ. ಅದು ಇದೇ. ನಾನು ಹೇಳಲಿರುವ ಎರಡೇ ಮಾತುಗಳನ್ನು ತಿಳಿಸಿ ಹೇಳುವ ಮುನ್ನ ಹೀಗೆ ಮಾಡಬೇಕೆಂದಿದ್ದೇನೆ. ನಿಮ್ಮಂತಹ ಸುರಿತ ಅನುಭವಿಕ ನಾಗರಿಕರಿಗೆ ಹೆಚ್ಚುಬಾರಿ ಹೇಳಬೇಕಿಲ್ಲ. ಹಾಗೆ ಮೇಲಿಂದಮೇಲೆ ಹೇಳಿದರೆ ನಿಮ್ಮ

ಬುದ್ಧಿಶಕ್ತಿಗೆ ಅಪಮಾನ ಮಾಡಿದಂತಾದೀತು. ಕಾರಣ ಇಷ್ಟೇ ಸಾಕು. ನಾನು ಹೇಳುವ ಮುನ್ನ ಏನನ್ನು ಹೇಳಬೇಕೆಂದಿರುವೆನೆಂಬುದನ್ನು ಮೊದಲು ಹೇಳಿಬಿಡುತ್ತೇನೆ. ಆ ಮೇಲೆ ಹೇಳಬೇಕಾದುದನ್ನು ಹೇಳುತ್ತೇನೆ. ಕಡೆಗೆ ಏನೇನು ಹೇಳಿದೆನೆಂಬದನ್ನು ಒಂದುಬಾರಿ ಹೇಳುತ್ತೇನೆ. ನನಗೆ ಗೊತ್ತು, ನೀವು ಸೂಕ್ಷ್ಮಗ್ರಾಹಿಗಳಿದ್ದೀರಿ. ಒಂದೇ ಬಾರಿಗೆ ಗ್ರಹಿಸಬಲ್ಲಿರಿ. ನೀವು ಜಾಣರಿದ್ದೀರಿ. ದಡ್ಡರಿಲ್ಲ. ತಿಳಿದುಕೊಳ್ಳಬಲ್ಲಿರಿ. ಅರ್ಥ ಮಾಡಿಕೊಳ್ಳುವ ಯೋಗ್ಯತೆ ಇದೆ. ಕಾರಣ ಎಲ್ಲರಂತೆ ವೃಥಾ ಸುತ್ತಿ ಸುತ್ತಿ ಮಾತನಾಡಿ ಸಮಯ ಕಳೆಯದೆ ಮಾತು ಮುಗಿಸುವದೇ ನನ್ನ ಆಶೆ. (ಸಭೆಯಲ್ಲಿ ಗಲಾಟೆ. ಯಾರೋ ಒಬ್ಬರು ಬೆಕ್ಕಿನಂತೆ ಕೂಗಿದರು. ಮುಗಿಲಿಗೆ ಮೋರೆ ಯೆತ್ತಿ ನಾಯಿ ಕೂಗುವಂತೆ ಇನ್ನೊಬ್ಬರು ಧ್ವನಿಗೈದರು. ಕಡೆಗೊಬ್ಬರು ಕತ್ತೆಯನ್ನು ಅಣಕಿಸಿದರು. ಭಾಷಣಕಾರರು ಪೆಡ್ಡಾಸ್ತ್ರರಂತೆ ಸಿಟ್ಟಿಗೆದ್ದರು.) ಇದು ಶಿಸ್ತು ಅಲ್ಲ, ಕ್ರಮವಲ್ಲ, ನಾಚಿಕೆಗೇಡು. (ಒಬ್ಬೊಬ್ಬರೇ ಎದ್ದು ಆಕಳಿಸಿ ಕಂಣು ತಿಕ್ಕಿ ಮೈ ಮುರಿದು ಮನೆಯ ಹಾದಿ ಹಿಡಿದರು) ಭಾಷಣ ಆರಂಭವಾಗುವ ಮುನ್ನೆಯೇ ಹೀಗೆ ಸಭಿಕರು ಎದ್ದು ಹೋಗುವದು ನಂಯಲ್ಲ, ಸಂಪ್ರದಾಯವಲ್ಲ, ಶಿಷ್ಟಅಲ್ಲ, ಶಿಷ್ಟಸಂಪ್ರದಾಯವಲ್ಲ, ನಾನೀಗ ಭಾಷಣ ಮಾಡಲು ಬಂದಿಲ್ಲ. ಕೇವಲ ಎರಡೇ ಮಾತುಗಳನ್ನು ಈ ದುಃಖಸೂಚಕ ಸಭೆಗೆ ಈ ದುಃಖಕಾರಕ ಸಭೆಗೆ ತಿಳಿಸಿ ಇಳಿಯುವವನಿದ್ದೇನೆ, ಎರಡೇ ಮಾತುಗಳನ್ನು ಹೇಳಬೇಕಾಗಿದೆ. ಅರ್ಧ ನಿಮಿಷದಲ್ಲಿಯೇ ಅವನ್ನು ಹೇಳಿ ಮುಗಿಸಬಲ್ಲೆ. ನನಗೆ ಹೆಚ್ಚು ಸಮಯವು ಬೇಡ. ಆ ಎರಡರಲ್ಲಿ ಯಾವುದು ಹೆಚ್ಚು ಮುಖ್ಯವೋ ಅದನ್ನು ಮೊದಲು ಹೇಳುತ್ತೇನೆ, ಕಡಿಮೆ ಮುಖ್ಯವಾದುವನ್ನು ಕಡೆಗೆ ಹೇಳುತ್ತೇನೆ. ಆದರೆ ನನ್ನ ದುರ್ದೈವದಿಂದ ಎರಡೂ ಅಷ್ಟೇ ಮಹತ್ವದ ಮಾತುಗಳಿವೆ. ಎರಡನ್ನೂ ಒಮ್ಮೆಲೆ ಹೇಗೆ ಹೇಳಲಿ? ಒಂದು ಮುಂದಾದರೆ ಇನ್ನೊಂದು ಹಿಂದಾಗುತ್ತದೆ, ಒಂದು ಹಿಂದಾದರೆ ಇನ್ನೊಂದು ಮುಂದಾಗುತ್ತದೆ. ಆಯಿತು, ಪ್ರಾರಂಭ ಮಾಡುತ್ತೇನೆ. (ಸಭೆಯು ಅರ್ಧದಮೇಲೆ ಖಾಲಿಯಾಗಿದೆ)

ತೊಂಬತ್ತೈದು

## ಹುಚ್ಚು—ಕುರುಳು

ಸಭಿಕರೇ, ಈಗ ಸನ್ನ ಎಡಬದಿಯಲ್ಲಿ ಕುಳಿತಿರುವ, ಅಂದರೆ ಅಧ್ಯಕ್ಷ ಪೀಠದಲ್ಲಿ—ಪೀಠವೆಂದರೆ ಸೆನಪಾಯಿತು—ಪೀಠಕ್ಕೆ ನಾವು ಮರ್ಯಾದೆ ಕೊಡಲು ಮೊದಲು ಕಲಿಯಬೇಕು. ಮರ್ಯಾದೆ ಕೊಡುವದು ವ್ಯಕ್ತಿಗಲ್ಲ, ಪೀಠಕ್ಕೆ. ಇದನ್ನು ನಾವು ಕಲಿಯಬೇಕು. ಇಂದು ನಾವು ಕಲಿಯಬೇಕಾದುವು ಒಂದಲ್ಲ, ಎರಡಲ್ಲ, ಲೆಕ್ಕವಿಲ್ಲದಷ್ಟಿವೆ—ಲೆಕ್ಕವೆಂದರೆ ನೆನಪಾಯಿತು—ಲೆಕ್ಕದಲ್ಲಿ ನಮ್ಮ ವಿದ್ಯಾರ್ಥಿಗಳು ಬಹಳ ಹಿಂದೆ ಉಳಿದಿದ್ದಾರೆ. ಬರೀ ಇಂಗ್ಲೀಷು ಮಾತ್ರ ಮಾತನಾಡಲು ಬಂದರೆ ಏನು ಪ್ರಯೋಜನ? ಇಂಗ್ಲೀಷು ನಮ್ಮ ದೇಶದಲ್ಲಿ ಹಿಂದೆ ಇದ್ದಷ್ಟು ಕಾಲ ಮುಂದೆಯೂ ಇರಲಾರದು. ಅದು ಎಂದಿಗಾದರೂ ಹೋಗಲೇಬೇಕು, ಹೋಗಿಯೇ ಹೋಗುತ್ತದೆ. ರಾಷ್ಟ್ರಭಾಷೆಯಾದ ಹಿಂದಿಗೆ ಅದು ಜಾಗ ಕೊಡಬೇಕು. ಹಿಂದಿಯನ್ನು ದ್ವೇಷಿಸುವದು ಸರಿಯಲ್ಲ. ಹಿಂದಿಯನ್ನು ದ್ವೇಷಿಸುವವರು ರಾಷ್ಟ್ರದ ವೈರಿಗಳು, ಪ್ರಾಂತದ ವೈರಿಗಳು—ಪ್ರಾಂತವೆಂದರೆ ಸೆನಪಾಯಿತು—ಅಂದೊಮ್ಮೆ ಪ್ರಾಂತ ನಿರ್ಮಾಣದ ಹುಯಿಲೊಂದು ಎದ್ದಿದ್ದಿತು. ಇದು ರಾಜೀನಾಮೆಯ ಬಾಗಿಲವರೆಗೂ ಹೋಗಿ ಹಿಂದೆ ಬಂದಿತು. ಹಿಂದೆ ಬಂದದ್ದೇ ಒಂದು ರೀತಿಯಿಂದ ಒಳಿತಾಯಿತು. ಇಟ್ಟ ಹೆಜ್ಜೆಯನ್ನು ಹಿಂತೆಗೆಯುವದು ಸ್ತ್ರೀಯರ ಲಕ್ಷಣವೆಂದೂ ಹಲವರು ಟೀಕಿಸಿದರು. ಸ್ತ್ರೀಲಕ್ಷಣವೆಂದಮಾತ್ರಕ್ಕೆ ಸ್ತ್ರೀ ಎಂದಂತೇನೂ ಆಗಲಿಲ್ಲ. ಆದರ ಈ ಟೀಕೆಯು ಮುಖ್ಯವಾದುದು—ಟೀಕೆ ಎಂದರೆ ಸೆನಪಾಯಿತು—ಈಗಿನ ಟೀಕೆಗಳು ಹೇಳತೀರದಾಗಿವೆ. ಅಳತೆಗೆಟ್ಟಿವೆ—ಅಳತೆ ಎಂದರೆ ನೆನಪಾಯಿತು—ಪ್ರಜರಿಗೆ ಈ ಅಳತೆಯ ಕೂಳು ಸಾಕಾಗಿದೆಯೆಂದು ಹೋಟೆಲಗಳಲ್ಲಿ ಮಾತನಾಡಿಕೊಳ್ಳುತ್ತಲಿದ್ದಾರೆ—ಹೋಟೆಲುಗಳೆಂದರೆ ನೆನಪಾಯಿತು—ನಮ್ಮ ಹೋಟೆಲಗಳು ಹೊಲಸಿನ ಮನೆಯಾಗಿವೆ. ಶುಭ್ರತೆ ಸ್ವಚ್ಛತೆ ಕಾಣದಾಗಿವೆ—ಸ್ವಚ್ಛತ ಎಂದರೆ ನೆನಪಾಯಿತು—ನಾವು ಮೊಟ್ಟಮೊದಲು ನಮ್ಮ ಮನಸ್ಸನ್ನು ಸ್ವಚ್ಛ ಮಾಡಿಕೊಳ್ಳಬೇಕು. ಇಲ್ಲದಿದ್ದಲ್ಲಿ ನಮ್ಮ ರಾಷ್ಟ್ರಕ್ಕೆ ಮೋಕ್ಷವಿಲ್ಲ—

ಮೋಕ್ಷವೆಂದರೆ ನೆನಪಾಯಿತು—ಮೋಕ್ಷ ಸ್ವರ್ಗ ಕೈಲಾಸಗಳ ನಮ್ಮ ಕಲ್ಪನೆಯು ಸರಿಯಿಲ್ಲ. ನಮ್ಮ ತಿಳುವಳಿಕೆಗಳು ತಿಳಿಯಾಗಬೇಕು. (ಟೊಪ್ಪಿಗೆಯ ಬುಡದಲ್ಲಿಲ್ಲದ ತಲೆಯನ್ನು ತುರಿಸಿಕೊಂಡಾಗ ತಲೆಯು ನೆನಪಾಗಿ ನನ್ನ ಕಡೆ ನೋಡಿ) ನಾನೀಗ ಏನು ಹೇಳುತ್ತಿದ್ದೆ ? ('ತಿಳಿಯಾಗಬೇಕು' ಎಂಬ ಅವರ ಕಡೆಯ ಶಬ್ದವನ್ನು ಹೇಳಿದೆ) ಅಲ್ಲ ಅಲ್ಲ, ಮೊಟ್ಟಮೊದಲು ಏನನ್ನು ಹೇಳಿದೆ ? (ಈಗ ನನ್ನ ಎಡಬದಿಯಲ್ಲಿ ಕುಳಿತಿರುವ ಎಂದು ನೆನಪುಮಾಡಿಕೊಟ್ಟೆ) ಹಾ! ಅಹುದು ಅಹುದು. ಸಭಿಕರೇ, ಈಗ ನನ್ನ ಎಡಬದಿಯಲ್ಲಿ ಕುಳಿತಿರುವ ಶ್ರೀಮಂತರಾದ—ಶ್ರೀಮಂತರೆಂದರೆ ನೆನಪಾಯಿತು – ಶ್ರೀಮಂತರೆಲ್ಲರೂ ಕೆಟ್ಟವರು, ಬಡವರೆಲ್ಲರೂ ಸಜ್ಜನರು ಎಂದು ಹಲವರು ತಿಳಿದಂತಿದೆ. ಅದು ಅಕ್ಷರಶಃ ಸುಳ್ಳು. ತಪ್ಪು. ಅದು ಸಿನೇಮಾದಲ್ಲಿ ಮಾತ್ರವೇ ಸಾಧ್ಯ—ಸಾಧ್ಯವೆಂದರೆ ನೆನಪಾಯಿತು—ಜಗತ್ತಿನಲ್ಲಿ ಎಲ್ಲವೂ ಸಾಧ್ಯ. ಅಸಾಧ್ಯವಾದುದು ಜಗತ್ತಿನಲ್ಲಿಯೇ ಇಲ್ಲ. ಎಲ್ಲರೂ ಎಲ್ಲಕ್ಕೂ ಸಿದ್ಧರಾಗಲೇಬೇಕು. ನೀವೆಲ್ಲರೂ ಅಂಜದೆ ಅಳುಕದೆ ಬೆದರದೆ ಹೆದರದೆ **ಕಂಟೆ ಸೊಟ್ಟಬೇಕು**— (ಹದಿನೈದು ನಿಮಿಷಗಳ ಕರತಾಡನ)!) ಸೊಂಟ ಕಟ್ಟಿ ನಿಂತರೆ ಎಲ್ಲವೂ ಸಾಧ್ಯ. ಆದರೆ ಸಾಧನೆಗೆ ಸತ್ಯತೆ ಬೇಕು, ಶೀಲಬೇಕು, ಸತ್ಯಾಗ್ರಹ ಬೇಕು—ಸತ್ಯಾಗ್ರಹವೆಂದರೆ ನೆನಪಾಯಿತು—ಈಗ ಇದೂ ಒಂದು ಹುಡುಗಾಟಿಕೆಯೇ ಆಯಿತು. ಚಿಕ್ಕ ಪುಟ್ಟದಕ್ಕೆಲ್ಲ ಹಲವರು ಸತ್ಯಾಗ್ರಹ ಉಪವಾಸಗಳಿಂದ ಬೆದರಿಸುತ್ತಾರೆ. ಈ ಗೊಡ್ಡು ಬೆದರಿಕೆಗಳಿಗೆಲ್ಲ ಯಾರು ಅಂಜುತ್ತಾರೆ. ಅಂಜಿಕೆ ಹೇಡಿಗಳ ಲಕ್ಷಣ. ಎಲ್ಲಕ್ಕೂ ಅಂಜಲು ನಾವೇನು ಹೆಂಗಳೆಯರಲ್ಲ—ಹೆಂಗಳೆಯರೆಂದರೆ ನೆನಪಾಯಿತು—ಹೆಂಗಸರನ್ನು ನಮ್ಮ ದೇಶದಲ್ಲಿ ಸರಿಯಾಗಿ ನಡೆಸಿಕೊಳ್ಳುತ್ತಿಲ್ಲವೆಂಬ ದೂರು ಎಲ್ಲ ಕಡೆಯಿಂದಲೂ ಕೇಳಬರುತ್ತಿದೆ. ನೌಕರಿ ಹುದ್ದೆಗಳಿಗಾಗಿ ಅವರೂ ತಕರಾರು ನಡೆಸಿದ್ದಾರೆ. ಈ ವಿಷಯಗಳೆಲ್ಲ ಈಗ ಬೇಡ. (ನನ್ನಕಡೆ ನೋಡಿ) ನಾನೀಗ ಏನು ಹೇಳುತ್ತಿದ್ದೆ? ('ಈಗ ನನ್ನ ಎಡಬದಿಯಲ್ಲಿ

ಕುಳಿತಿರುವ ಶ್ರೀಮಂತರಾದ' ಎಂದು ಓದಿ ಹೇಳಿದೆ) ಹಾ! ಅಹುದು. ಈಗ ನನ್ನ ಎಡಬದಿಯಲ್ಲಿ—(ಅಧ್ಯಕ್ಷರು ಬೇಸತ್ತು ಎದ್ದು ಅಡ್ಡಾಡಿ ಕುರ್ಚಿಯನ್ನು ಬದಲಿಸಿ ಬಲಗಡೆ ಬಂದು ಕುಳಿತಿದ್ದರು. ಸಭೆಯಲ್ಲಿ ಬೊಳ್ಳೆಂದು ನಗೆ!) ಅಲ್ಲಾ, ಬಲಬದಿಯಲ್ಲಿ, ಯಾವಬದಿಯಲ್ಲಾದರೇನು? ಇಂತಹ ಚಿಕ್ಕಪುಟ್ಟ ವಿಷಯಗಳಿಗೆಲ್ಲ ನಾವು ಹೆಚ್ಚು ಮಹತ್ವ ಕೊಡಬಾರದು. ಎಲ್ಲರೂ ವಿದ್ಯಾವಂತರೇ ಇದ್ದೀರಿ—ವಿದ್ಯಾವಂತರೆಂದರೆ ೆನಪಾಯಿತು—ವಿದ್ಯೆ ಕಲಿತವರು ಹಳ್ಳಿಗೆ ಮರಳಿರಿ ಎಂದು ನಮ್ಮ ೆರಿಯರು ಹೇಳುತ್ತಲೇ ಇದ್ದಾರೆ. ನಮ್ಮ ಹಳ್ಳಿಗರು ಕಾಂಗ್ರೆಸ್ಸನ್ನೇ ನಂಬಿದ್ದಾರೆ; ಅವರನ್ನು ದೇವರೇ ಕಾಯಬೇಕು. ಯಾರೂ ಹಳ್ಳಿಗೆ ಹೋಗಲು ಅದೇಕೋ ಒಪ್ಪಿಲ್ಲ. ಹಾಗೂ ಹೀಗೂ ಕೆಟ್ಟ ನಾಟಕ ಕಂಪೆನಿಗಳೂ ಸೊಟ್ಟ ಡಾನ್ಸು ಗ್ರೂಪುಗಳು ಮಾತ್ರವೇ ಹೋಗುತ್ತಿವೆ. ಕಲೆ ಸೇವೆಗಾಗಿ ಅವು **ಕಂಕಬದ್ಧ**ಣವಾಗಿವೆ. (ಸಭೆಯಲ್ಲಿ ಹೆಚ್ಚುಹುಚ್ಚು ನಗೆ). ಕಂಕಣಬದ್ಧರಾದವರಿಗೆ ಎಲ್ಲರೂ ಸಹಕಾರ ನೀಡಬೇಕು—ಸಹಕಾರವೆಂದರೆ ನೆನಪಾಯಿತು–ಎಲ್ಲದಕ್ಕೂ ಸರಕಾರದ ಮುಖ ನೋಡುತ್ತ ಕೂಡುವದು ಒಳಿತಲ್ಲ. ಈಗ ನಾನೇನು ಹೇಳುತ್ತಿದ್ದೆ? (ಸಭೆಯಲ್ಲಿ ಗೊಂದಲವೇ ಎದ್ದಿತು) ಆಯಿತು, ಆಯಿತು. ಈಗಲೆ ಭಾಷಣವನ್ನು ಪ್ರಾರಂಭಿಸಿ ಬಿಡುತ್ತೇನೆ. ನಾನು ಹೇಳಬೇಕೆಂದಿದ್ದ ಎರಡೇ ಮಾತುಗಳು ಯಾವೆಂದರೆ ನಮ್ಮ ಕೋರಿಕೆಯಮೇಲೆ ನಮ್ಮನ್ನಗಲಿಹೋದ–ಅಗಲಿಹೋದ ಎಂದರೆ ನೆನಪಾಯಿತು—ಈಗ ನಾವು ಅಂದರೆ ನೀವು ಅನಾಥರಾಗಿ ... ನಮಗೆ ಈಗ ಹಾದಿ ತೋರುವವರು ಒಬ್ಬರೆಂದರೆ ಒಬ್ಬರೇ ಇದ್ದಾರೆ. ಅವರಾರೆಂಬುದನ್ನು ನಾನು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಅವರನ್ನು ಇಡೀ ದೇಶವೇ ಪೂಜಿಸುತ್ತಿದೆ. ಅಮೇರಿಕೆ ಕೊಂಡಾಡಿದೆ. ಅವರ ಭಾವಚಿತ್ರವಿಲ್ಲದ ಮನೆಯೇ ಇಲ್ಲ, ಹೋಟೆಲಿಲ್ಲ, ಚಹದಂಗಡಿ ಇಲ್ಲ, ಸಲೂನಿಲ್ಲ. ಚಿಕ್ಕಮಕ್ಕಳ ಬಾಯಲ್ಲೂ ಅವರ ಹೆಸರು ಇದೆ. ಅವರು ಯಾರೆಂದರೆ ನಮ್ಮ ಪ್ರೀತಿಯ............ಅವರು............(ಆತ್ಮ) ಅವರ

ಹೆಸರೇನ್ರಿ, ಹೊಟ್ಟೆಯಲ್ಲಿದೆ ಬರಲೊಲ್ಲದು........ (ತಲೆ ಕೆರೆದುಕೊಂಡು ಬೆರಳಿನಿಂದ ಹಣೆ ಬಡಿದುಕೊಂಡು, ಉಗುರು ಕಡಿದು, ಗಡ್ಡವನ್ನು ಕೆರೆದು) ಆ... ........ಇವರು...........ನಮ್ಮ (ಪ್ರಕಾಶ) ನೇರೂ ನೇರೂ! (ನನ್ನ ಕಡೆ ತಿರುಗಿ) ನಾನೇನು ಹೇಳುತ್ತಿದ್ದೆ? 'ಅಗಲಿಹೋದ' ಎಂದು ನೆನಪುಮಾಡಿಕೊಟ್ಟೆ ಹಾ, ಅಹುದು. ನಿಮ್ಮೆಲ್ಲರ ಶಾಂತಿಗೆ ಆತ್ಮನು ಪರಮಾತ್ಮನನ್ನಿರೀಯಲಿ ಎಂದು ದೇವರ ಪರವಾಗಿ ಆಗಲಿ ಹೋದವರನ್ನು ಬೇಡಿಕೊಳ್ಳುತ್ತೇನೆ.

ಅದೇಕೋ ಸಭೆಯಲ್ಲಿ ನಗು ಹೊರಡಲಿಲ್ಲವೆಂದು ತಲೆ ಎತ್ತಿ ನೋಡಿದೆ. ನಾನೊಬ್ಬನೇ ಇಡೀ ಸಭೆ! ಸರಿಯಾದ ಸಮಯಕ್ಕೆ ಭಾಷಣಕಾರರೂ ಪರಾರಿಯಾದ ಕಾರಣ ಸುದ್ದಿಗಾರರೇ ಜನಗಣಮನ ಹಾಡಿಕೊಂಡು ಕಾರ್ಯಕ್ರಮವನ್ನು ಸಾಂಗೋಪಾಂಗವಾಗಿ ಮುಗಿಸಿ ಮನೆಗೆ ಹೊರಟರು ಎಂಬ ಕಡೆಯ ವಾಕ್ಯವನ್ನು ವರದಿಗೆ ಸೇರಿಸಿ ಸ್ವಂತ ಸುಳ್ಳು ಸುದ್ದಿಗಾರನೆಂಬ ಅಪವಾದದಿಂದ ಮುಕ್ತನಾದೆ.



## ಮಂದಾಳುಗಳಿಗೊಂದು ಮುಂದಾಳು

ಮುಂದಾಳಾಗುವದೆಂದರೆ ಬಹು ಜನರಿಗೆ ಇಂದು–ಆಗಸ್ಟ ಹದಿನೈದರ ನಂತರ–ಬಾಯಿ ನೀರೊಡೆಯುವ ಮಾತಾಗಿದೆ. ಮುಂದಾಳುಗಳಿಗೊಮ್ಮೊಮ್ಮೆ ತಲೆಯೊಡೆಯುವದೂ ಉಂಟು. ಅನುಗಾಲವೂ ಕೊರಳಿಗೆ ಹೂಮಾಲೆಯಾದರೆ, ಆಗಾಗ್ಗೆ ತಲೆಗೆ ಕಲ್ಲಿನೇಟಾದರೂ ಬೇಡವೆ? ಹಲವು ಮುಂದಾಳುಗಳಿಗೆ ಈ ಅಪಾಯವೆ ಇಲ್ಲ. ತಲೆ ಇದ್ದವರಿಗೆ ಮಾತ್ರ ತಾನೇ, ಕಲ್ಲಿನ ಭಯ! ಮಂದಾಳುಗಳ ಗುಂಪಿನಲ್ಲಿ ಮುಂದಾಳಾಗುವದು ಅಷ್ಟೇನೂ ಕಷ್ಟದ ಕೆಲಸವಲ್ಲ. ಮುಖ್ಯವಾಗಿ ಈ ನಾಲ್ಕು ಅಂಶಗಳನ್ನು ನೆನಪಿನಲ್ಲಿಟ್ಟರೆ ಯಾರೂ ಮುಂದಾಳು ಆಗಬಹುದು.

೧. ಸಭೆಯಲ್ಲಿ ಮಾತನಾಡುವಾಗ ಯಾರನ್ನೂ ಅಧ್ಯಕ್ಷರನ್ನಾಗಿ ಕೊಡಿಸಕೂಡದು. ಒಂದುವೇಳೆ ಒಂದು ಅಧ್ಯಕ್ಷನ್ಯಗವು ಇರಲೇಬೇಕಾದರೆ, ಪೂರ್ತಿ ಕೀಳರಿಮೆಯುಳ್ಳದುದನ್ನೇ ಆರಿಸಿ, ಕೊನೆಗೆ ಅಧ್ಯಕ್ಷರ ಅಂತ್ಯ ಭಾಷಣವನ್ನಿಟ್ಟು, ಅದಕ್ಕೆ ಸಮಯ ದೊರೆಯದಂತೆ ಮಾಡತಕ್ಕದ್ದು.

೨. ಸರಿಯಾದ ಸಮಯಕ್ಕೆ ಸಭೆಗೆ ಬರಕೂಡದು. ಸೇರಿದವರಿಗೆ ಬೇಸರವಾಗುವಷ್ಟು ಕಾಯಿಸಿ, ಅವರು ಏಳುವ ಹೊತ್ತಿಗೆ ಅವಸರದಿಂದ ಸಭೆಯಲ್ಲಿ ಪ್ರವೇಶಿಸಬೇಕು.

೩. ತನ್ನ ಭಾಷಣವು ಮುಗಿದ ತಕ್ಷಣವೇ ಎದ್ದು ಹೊರಡಬೇಕು. ಬೇರೆಯವರ ಉಪನ್ಯಾಸಗಳನ್ನು ಕೇಳುತ್ತ ಕೂಡುವದು ಮುಂದಾಳು ತನಕ್ಕೇ ಅಗೌರವ.

೪. ಸಭೆಯು ವಿಸರ್ಜನೆಯಾಗುವ ಮೊದಲೆ ತೆರಳುವುದಕ್ಕೆ ಕ್ಷಮೆಯನ್ನು ಸ್ವತಃ ಕೇಳಕೂಡದು. "ಕಾರ್ಯ ಬಾಹುಳ್ಯದ ಮೂಲಕ ಶ್ರೀ........ಯವರು ಈಗಲೇ ಹೊರಡಬೇಕಾಗಿದೆ" ಎಂದು ಬೇರಿತರರ ಬಾಯಿಂದ ಆಡಿಸಬೇಕು.

೫. ತನ್ನ ಮಾತೃಭಾಷೆಯಲ್ಲಿ ಉಪನ್ಯಾಸ ಮಾಡುವದಂತೂ ಶುದ್ಧ ದಡ್ಡತನ. ಸಭೆಗೆ ಬಂದ ಬಹುಜನರ ಭಾಷೆಯೂ ಕೂಡದು. "ನನ್ನದೂ ನಿಮ್ಮದೂ ಕೂಡ ಅಲ್ಲದ ಬೇರೆ ಭಾಷೆಯಲ್ಲಿ (ಇಂಗ್ಲೀಷಿನಲ್ಲಿ) ಮಾತನಾಡುವ ದುಸ್ಥಿತಿಯು ಬಂದಿರುವದು ತುಂಬ ವಿಷಾದಕರವೆಂದು ಹೇಳಿ ಭಾಷಣವನ್ನು ಪ್ರಾರಂಭಿಸುವದು ಉತ್ತಮ.

೬. ಬಹು ಜಾಣನಲ್ಲದವನೊಬ್ಬನನ್ನು ಭಾಷಾಂತರ ಮಾಡಲು ನಿಲ್ಲಿಸಬೇಕು. ಆ ವ್ಯಕ್ತಿಯು ಆರಡಿಯೂ ಕೀಳರಿಮೆಯಿಂಥ ತುಂಬಿ ತುಳುಕಿ, ಸರಿಯಾದ ಶಬ್ದಗಳನ್ನು ಹುಡುಕಲು ಭಯದಿಂದ ಕಂಪಿತನಾಗುತ್ತಿರಬೇಕು. ಹಿರಿಸಂಗೀತಗಾರರು ತಾಳತಪ್ಪುವ ತಬಲದವನನ್ನು ಹಿಂದೆ ತರುವವರಲ್ಲಿಯೂ ಇದೇ ಗುಟ್ಟು. ಅವನ ತರ್ಜುಮೆಯಲ್ಲಿ ಆಗಾಗ್ಗೆ ತಪ್ಪು ಹಿಡಿದಂತೆ ಮಾಡಿ ತಿದ್ದಿದಂತೆ ತೋರಿಸಬೇಕು.

೭. ಕಡೆಗೊಮ್ಮೆ ಪುರಜನರ ಭಾಷೆಯಲ್ಲಿ ಎರಡು ತಪ್ಪು ಮಾತುಗಳನ್ನಾಡಬೇಕು. ಆ ವಾಕ್ಯವನ್ನು ಬೇರೆ ಭಾಷೆಯ ಅಕ್ಷರಗಳಲ್ಲಿ ಬರೆದುಕೊಂಡು ತಪ್ಪು ತಪ್ಪು ಓದಬೇಕು. (ಸಭೆಯಲ್ಲಿ ನಗೆ) ಎಂದು ಪತ್ರಿಕೆಗಳಲ್ಲಿ ಬರುತ್ತದೆ.

೮. ಮಾತಿಗೊಮ್ಮೆ 'ನಾನು' 'ನನಗೆ' 'ನನ್ನ ಅಭಿಪ್ರಾಯ'

'ನನ್ನ ಅಭಿಮತ' ಎಂಬ ಶಬ್ದಗಳನ್ನು ಪ್ರಯೋಗಿಸಬೇಕು; ಇಲ್ಲದಿದ್ದರೆ ಶಾತ್ಯವೆಷ್ಟೂ ಬೆಳೆಯಲಾರದು

೯. ಒಂದುಬಾರಿ ಕರಿಸೀರಿನ ಶಿಕ್ಷೆಯಾಗಿದ್ದರೆ ಸಾಕು "ನಾನು ವಿದೇಶ ಪ್ರವಾಸ ಮಾಡುತ್ತಿದ್ದಾಗ........" ಎಂದು ಹೇಳಿಕೊಳ್ಳಬಹುದು.

೧೦. ಮನೆಯ ಪಕ್ಕೆಯಲ್ಲಿ ವಿಪತ್ತುಗಳಾದರೂ ಅನಧ್ಯಕ್ಷರಾಗಿ ಹೋಗಕೂಡದು. ಮೊಡ್ಡಸ್ತಿಕೆಯ ಆಶೀರ್ವಾದಗಳಿಂದ ಸಂದೇಶವನ್ನು ಮಾತ್ರ ಕಳಿಸಬೇಕು.

ಇದುರಿನಲ್ಲಿ ಬಂದರೆ ಯಾರ ಕಣ್ಣಿಗೂ ಬೀಳದಿದ್ದರೂ ಸಂದೇಶವನ್ನು ಕಳಿಸಿದರೆ ಎಲ್ಲರ ಕಿವಿಯಲ್ಲೂ ಬಿದ್ದಾರು.

೧೧. ಭಾಷಣದಲ್ಲಿ ಪರದೇಶೀಯರ ಹೆಸರುಗಳನ್ನು ಮಂತ್ರದಂತೆ ಉಚ್ಚರಿಸಬೇಕು. ಹೋಟೆಲ ಮಾಣಿಯು ತಿಂಡಿಯ ದಿನಸುಗಳನ್ನು ಹೇಳುವಂತೆ ಒಂದೇ ಉಸುರಿನಲ್ಲಿ ಐಶಿನಿಸ್ಕಿ, ಮಾಯಾಕೋವಿಸ್ಕಿ, ಸ್ಟಾನಿಸ್ಲವಾಸ್ಕಿ, ಟ್ರಾಟಸ್ಕಿ, ವ್ಲಿಕ್ಸಿ ಎಂದು ನೀವು ನುಡಿಯುತ್ತಿದ್ದರೆ ಸಭಿಕರೆಲ್ಲರೂ ಬಾಯಿಬಿಟ್ಟು ಕೇಳುತ್ತಾರೆ.

೧೨. ಯಾರಾದರೂ ದೊಡ್ಡೊಬ್ಬ ಮುಖಂಡರನ್ನು—ನೆಹರೂ ಪಟೇಲರಂತಹರನ್ನು ಸಿಕ್ಕಾಬಟ್ಟೆ ಟೀಕಿಸಿ ಬೈಯಬೇಕು. ಇದು ಮುಂದಾಳಾಗುವ ಮಹಾಮಂತ್ರ.

ಇಷ್ಟೆಲ್ಲವನ್ನು ಅನುಸರಿಸಿಯೂ ನೀವು ಮುಂದಾಳುಗಳ ಮಧ್ಯೆ ಮುಂದಾಳಾಗದಿದ್ದರೆ, ಹಿಂದಾಳುಗಳು ಮುಂದಾಳುಗಳಲ್ಲ, ಮುಂದಾಳಾಗಲು ಆಂದೋಳನ ಮಾಡಿದ ಮುಂದಾಳಾದ ನೀವೇ ಹಿಂದಾಳಾಗಿ ಎಂದಿಗೂ ಉಳಿದಿರೆಂದು ಉಳಿದ ಸಮಯವನ್ನು ಕಳೆಯತಕ್ಕದ್ದು.

.ದವರಿಗೆ

